KA / BG-GPO / 2515 / WPP-47 / 2009-2011


# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ನವೆಂಬರ್ ೧೯, ೨೦೦೯ (ಕಾರ್ತೀಕ ೨೮, ಶಕ ವರ್ಷ ೧೯೩೧) | ಸಂಚಿಕೆ ೪೬ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ ಸೃಜಿಸಲಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 52 ಸಸಿವಿ 95, ದಿನಾಂಕ: 8–8–2005.
2. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 61 ಸಸಿವಿ 2006, ದಿನಾಂಕ: 21–8–2006.
3. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 43 ಸಸಿವಿ 2007, ದಿನಾಂಕ: 31–8–2007.
4. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 661 ಸಅಸೇ 2008 ದಿನಾಂಕ: 19–8–2008.
5. ಸರ್ಕಾರದ ಅಪರ ಕಾರ್ಯದರ್ಶಿ (ಅಂತರರಾಜ್ಯ ಜಲ ವಿವಾದ), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ ಲಾ 5 ಸಿಡಬ್ಲ್ಯೂಡಿ 2009 ದಿನಾಂಕ: 24–8–2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿತ್ತು. ತದನಂತರ ಕ್ರಮಸಂಖ್ಯೆ (2)ರಿಂದ (4)ರ ಆದೇಶಗಳಲ್ಲಿ ಈ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮಸಂಖ್ಯೆ 4ರಲ್ಲಿ ಓದಲಾದ ಆದೇಶಗಳಲ್ಲಿ ಈ ಹುದ್ದೆಗಳನ್ನು ದಿನಾಂಕ:28.8.2008 ರಿಂದ ಒಂದು ವರ್ಷದ ಅವಧಿಗೆ ಅಥವಾ ಕಾವೇರಿ, ಕೃಷ್ಣ ಜಲ ವಿವಾದ ನ್ಯಾಯಾಧೀಕರಣ ಮುಕ್ತಾಯವಾಗುವವರೆಗೆ ಹಾಗೂ ಮಹದಾಯಿ ವಿಷಯವು ಇತ್ಯರ್ಥವಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಕಾವೇರಿ ಜಲ ವಿವಾದ ನ್ಯಾಯಾಧೀಕರಣ ಅಂತಿಮ ತೀರ್ಪಿನ ಬಗ್ಗೆ ಸಂಬಂಧಪಟ್ಟ ರಾಜ್ಯಗಳು ಸರ್ವೋಚ್ಚ ನ್ಯಾಯಾಲಯದಲ್ಲಿ ಮರು ಪರಿಶೀಲನೆ ಅರ್ಜಿ ಸಲ್ಲಿಸಿರುವ ಪ್ರಯುಕ್ತ ಸದರಿ ಪ್ರಕರಣಗಳು ಸರ್ವೋಚ್ಚ ನ್ಯಾಯಾಲಯದಲ್ಲಿ ಮುಂದುವರೆಯುತ್ತಿರುವುದರಿಂದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಕಾನೂನು ಕೋಶ (ಅಂತರ ರಾಜ್ಯ ಜಲ ವಿವಾದ ಶಾಖೆ) ಇಲ್ಲಿ ಸೃಜಿಸಿ ಮುಂದುವರೆಸಿರುವ 11 ಹುದ್ದೆಗಳನ್ನು ದಿನಾಂಕ: 28–9–2009ರಿಂದ 1 ವರ್ಷದ ಅವಧಿಗೆ ಅಥವಾ ಕಾವೇರಿ/ಕೃಷ್ಣಾ/ಮಹಾದಾಯಿ ಜಲ ವಿವಾದ ಪ್ರಕರಣ ಇತ್ಯರ್ಥವಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸುವಂತೆ ಕೋರಲಾಗಿದೆ.

| | | |
|---|---|---|
| 1) | ಅಪರ ಕಾರ್ಯದರ್ಶಿ | 1 ಹುದ್ದೆ |
| 2) | ಉಪ ಕಾರ್ಯದರ್ಶಿ | 1 ಹುದ್ದೆ |

| | | |
|---|---|---|
| 3) | ಶಾಖಾಧಿಕಾರಿ | 1 ಹುದ್ದೆ |
| 4) | ಹಿರಿಯ ಸಹಾಯಕರು | 2 ಹುದ್ದೆಗಳು |
| 5) | ಶೀಘ್ರಲಿಪಿಗಾರರು | 2 ಹುದ್ದೆಗಳು |
| 6) | ಬೆರಳಚ್ಚುಗಾರರು | 2 ಹುದ್ದೆಗಳು |
| 7) | ದಲಾಯತ್ | 1 ಹುದ್ದೆ |
| 8) | ಅಡ್ವೋಕೇಟ್ ಜನರಲ್ ರವರ ಆಪ್ತ ಸಿಬ್ಬಂದಿ ಶಾಖೆಗೆ ಸೃಜಿಸಲಾಗಿರುವ ಶೀಘ್ರಲಿಪಿಗಾರರ ಹುದ್ದೆ | 1 ಹುದ್ದೆ |
| | ಒಟ್ಟು | **11 ಹುದ್ದೆಗಳು** |

ಅದರಂತೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 464 ಸಆಸೇ 2009, ಬೆಂಗಳೂರು, ದಿನಾಂಕ: 29ನೇ ಸೆಪ್ಟಂಬರ್ 2009.**

ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ ಸೃಜಿಸಲಾದ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 29–08–2009 ರಿಂದ ಒಂದು ವರ್ಷದ ಅವಧಿಗೆ ಅಥವಾ ಕಾವೇರಿ / ಕೃಷ್ಣಾ / ಮಹಾದಾಯಿ ಜಲ ವಿವಾದ ಪ್ರಕರಣಗಳು ಇತ್ಯರ್ಥವಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಿದೆ.

| | | |
|---|---|---|
| 1) | ಅಪರ ಕಾರ್ಯದರ್ಶಿ | 1 ಹುದ್ದೆ |
| 2) | ಉಪ ಕಾರ್ಯದರ್ಶಿ | 1 ಹುದ್ದೆ |
| 3) | ಶಾಖಾಧಿಕಾರಿ | 1 ಹುದ್ದೆ |
| 4) | ಹಿರಿಯ ಸಹಾಯಕರು | 2 ಹುದ್ದೆಗಳು |
| 5) | ಶೀಘ್ರಲಿಪಿಗಾರರು | 2 ಹುದ್ದೆಗಳು |
| 6) | ಬೆರಳಚ್ಚುಗಾರರು | 2 ಹುದ್ದೆಗಳು |
| 7) | ದಲಾಯತ್ | 1 ಹುದ್ದೆ |
| 8) | ಅಡ್ವೋಕೇಟ್ ಜನರಲ್ ರವರ ಆಪ್ತ ಸಿಬ್ಬಂದಿ ಶಾಖೆಗೆ ಸೃಜಿಸಲಾಗಿರುವ ಶೀಘ್ರಲಿಪಿಗಾರರ ಹುದ್ದೆ | 1 ಹುದ್ದೆ |
| | ಒಟ್ಟು | **11 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 2290

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3).

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಬಿಜಾಪುರ ಜಿಲ್ಲೆ ಬಸವನಬಾಗೇವಾಡಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ 07–08–1995.
2. ಮುಖ್ಯಮಂತ್ರಿಯವರ ಕಛೇರಿ ಟಿಪ್ಪಣಿ ಪತ್ರ ಸಂ: ಮುಮಂ/ಆ.ಕಾ/986/2009 ದಿನಾಂಕ:15.07.2009.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ದಿನಾಂಕ: 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಬಿಜಾಪುರ ಜಿಲ್ಲೆ ಬಸವನಬಾಗೇವಾಡಿ ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಸರ್ಕಾರ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 63 ಯೋವಿವಿ 2009 ಬೆಂಗಳೂರು, ದಿನಾಂಕ: 29ನೇ ಸೆಪ್ಟಂಬರ್ 2009.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಆರು ಜನರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ತಾಲ್ಲೂಕು | ಹೆಸರು | ವರ್ಗ |
|---|---|---|---|
| 1. | ಬಸವನ ಬಾಗೇವಾಡಿ ತಾಲ್ಲೂಕು (ಬಿಜಾಪುರ ಜಿಲ್ಲೆ) | 1) ಶ್ರೀ ಅಮೀನಪ್ಪ ಭೀಮಪ್ಪ ತೆಗ್ಗಿ, ರೋಣಿಹಾಳ | ಎಸ್.ಸಿ. |
| | | 2) ಶ್ರೀ ಬಾಶಾಸಾಬ ಅಲ್ಲಾಬಕ್ಷ ಚೌಧರಿ, ಕೋಲ್ಹಾರ | ಅಲ್ಪ ಸಂಖ್ಯಾತರು |
| | | 3) ಶ್ರೀಮತಿ ಮಲ್ಲಮ್ಮ ಪುಂಡಲೀಕಪ್ಪ ಹಂಚಿನಾಳ, ಮುತ್ತಗಿ | ಮಹಿಳೆ |
| | | 4) ಶ್ರೀ ಬಾಬು ಮುಚ್ಚಂಡಿ, ನಿಡಗುಂದಿ | ಸಾಮಾನ್ಯ |
| | | 5) ಶ್ರೀ ಅಪ್ಪನಗೌಡ ಬಸಪ್ಪ, ಮನಗೂಳಿ, ತೆಲಸಂಗಿ | ಸಾಮಾನ್ಯ |
| | | 6) ಶ್ರೀ ಗಣಪತಿ ಸಣ್ಣೂರ, ಹೆಬ್ಬಾಳ | ಹಿಂ.ವರ್ಗ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಚಿಕ್ಕರಾಜು**

ಪಿ.ಆರ್. 2291

ಸರ್ಕಾರದ ಅಧೀನ ಕಾರ್ಯದರ್ಶಿ, 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ವಿಷಯ:** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾವೇರಿ ಜಿಲ್ಲೆ ಹಿರೇಕೆರೂರು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ 07–08–1995.
2. ಮುಖ್ಯಮಂತ್ರಿಯವರ ಕಛೇರಿ ಟಿಪ್ಪಣಿ ಪತ್ರ ಸಂ: ಮುಮಂ/ಆ.ಕಾ/786/2009 ದಿನಾಂಕ:04.07.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಹಾವೇರಿ ಜಿಲ್ಲೆ ಹಿರೇಕೆರೂರು ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 65 ಯೋವಿವಿ 2009, ಬೆಂಗಳೂರು, ದಿನಾಂಕ: 25ನೇ ಸೆಪ್ಟಂಬರ್ 2009**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಆರು ಜನರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ತಾಲ್ಲೂಕು | ಹೆಸರು | ವರ್ಗ |
|---|---|---|---|
| 1. | ಹಿರೇಕೆರೂರು ತಾಲ್ಲೂಕು (ಹಾವೇರಿ ಜಿಲ್ಲೆ) | 1) ಶ್ರೀ ಚಂದ್ರು ಪಕ್ಕೀರಪ್ಪ ಗಾಳಿ ಸಾ: ಸಾತೇನ ಹಳ್ಳಿ, ತಾ: ಹಿರೇಕೆರೂರ | ಹಿಂ.ವರ್ಗ |
| | | 2) ಶ್ರೀ ಪಾಲಾಕ್ಷಗೌಡ ಹೆಚ್.ಪಾಟೀಲ ಸಾ: ಮೇದೂರು, ತಾ: ಹಿರೇಕೆರೂರು | ಸಾಮಾನ್ಯ |
| | | 3) ಶ್ರೀ ಶ್ರೀಕಾಂತ ಭೀಮರಾವ್ ಕುಲಕುರ್ಣಿ ಸಾ: ರಟ್ಟಿಹಳ್ಳಿ ತಾ: ಹಿರೇಕೆರೂರು | ಸಾಮಾನ್ಯ |
| | | 4) ಶ್ರೀ ಅಶೋಕ ಹನುಮಂತಪ್ಪ ಹೆಡಿಯಾಳ ಸಾ: ಚಪ್ಪರಹಳ್ಳಿ ತಾ: ಹಿರೇಕೆರೂರು | ಎಸ್.ಟಿ |
| | | 5) ಶ್ರೀಮತಿ ಗದಿಗೆಮ್ಮ ಶಿವಣ್ಣ ಗುತ್ತಲ ಸಾ: ಮಾಸೂರು, ತಾ: ಹಿರೇಕೆರೂರು | ಮಹಿಳೆ |

| ಕ್ರ.ಸಂ. | ತಾಲ್ಲೂಕು | ಹೆಸರು | ವರ್ಗ |
|---|---|---|---|
| | | 6) ಶ್ರೀ ಫೈರೋಜ್ ಅಬ್ದುಲ್ ಜಬ್ಬಾರ್ ಸಬ ಸವಣೂರು ಸಾ: ಹಿರೇಕೆರೂರು, ಐ.ಬಿ. ಹಿಂಭಾಗ | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಚಿಕ್ಕರಾಜು**

ಪಿ.ಆರ್. 2292 ಸರ್ಕಾರದ ಅಧೀನ ಕಾರ್ಯದರ್ಶಿ, 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ಆದೇಶ ಸಂಖ್ಯೆ: ಪಸಂಮೀ 290 ಪಸಸೇ 2008, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2009**

**ವಿಷಯ:** ದಾವಣಗೆರೆ ಜಿಲ್ಲೆ, ದಾವಣಗೆರೆ ತಾಲ್ಲೂಕಿನ ದೊಡ್ಡರಂಗವ್ವನಹಳ್ಳಿ ಗ್ರಾಮಕ್ಕೆ ಮಂಜೂರಾಗಿರುವ ಪಶುಚಿಕಿತ್ಸಾಲಯವನ್ನು ಕಂದನಕೋವಿ ಗ್ರಾಮಕ್ಕೆ ಸ್ಥಳಾಂತರಿಸುವಿಕೆ.

**ಓದಲಾಗಿದೆ:** 1. ಆದೇಶ ಸಂಖ್ಯೆ: ಪಸಂಮೀ 217 ಪಸಸೇ 2007, ದಿನಾಂಕ: 31–08–2007.
2. ಪತ್ರ ಸಂಖ್ಯೆ: ಆಪಸಂ/ಡಿವಿಡಿ–3/ವಿವ–07/07–08, ದಿನಾಂಕ: 06–08–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ದಾವಣಗೆರೆ ಜಿಲ್ಲೆ, ದಾವಣಗೆರೆ ತಾಲ್ಲೂಕಿನ ದೊಡ್ಡರಂಗವ್ವನಹಳ್ಳಿ ಗ್ರಾಮಕ್ಕೆ ಹೊಸದಾಗಿ ಪಶುಚಿಕಿತ್ಸಾಲಯ ತೆರೆಯಲು ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ದೊಡ್ಡರಂಗವ್ವನಹಳ್ಳಿ ಗ್ರಾಮದಲ್ಲಿ 2007ರ ಜಾನುವಾರು ಗಣತಿಯಂತೆ ಹಾಗೂ ರಾಷ್ಟ್ರೀಯ ಕೃಷಿ ಆಯೋಗದ ಶಿಫಾರಸ್ಸಿನಂತೆ ಜಾನುವಾರುಗಳು ಇಲ್ಲದಿರುವ ಕಾರಣ ಮತ್ತು ದಾವಣಗೆರೆ ಜಿಲ್ಲಾ ಉಸ್ತುವಾರಿ ಸಚಿವರು ಮತ್ತು ಮಾಯಕೊಂಡ ಕ್ಷೇತ್ರದ ಶಾಸಕರ ಅಭಿಪ್ರಾಯದಂತೆ ದೊಡ್ಡರಂಗವ್ವನಹಳ್ಳಿ ಗ್ರಾಮಕ್ಕೆ ಮಂಜೂರಾದ ಪಶುಚಿಕಿತ್ಸಾಲಯವನ್ನು ಅದೇ ತಾಲ್ಲೂಕಿನ ಕಂದನಕೋವಿ ಗ್ರಾಮಕ್ಕೆ ಸಿಬ್ಬಂದಿ ಸಮೇತ ಸ್ಥಳಾಂತರಿಸುವಂತೆ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ರಾಷ್ಟ್ರೀಯ ಕೃಷಿ ಆಯೋಗದ ಶಿಫಾರಸ್ಸಿನಂತೆ ಪ್ರತಿ 5000 ಜಾನುವಾರು ಘಟಕಗಳಿಗೆ ಒಂದು ಪಶುಚಿಕಿತ್ಸಾಲಯ ಇರಬೇಕಾಗುತ್ತದೆ. ದೊಡ್ಡರಂಗವ್ವನಹಳ್ಳಿ ಗ್ರಾಮದಲ್ಲಿ 2007ರ ಜಾನವಾರು ಗಣತಿಯಂತೆ 299 ಜಾನುವಾರುಗಳಿದ್ದು ರಾಷ್ಟ್ರೀಯ ಕೃಷಿ ಆಯೋಗ ನಿಗದಿಪಡಿಸಿದ ಪ್ರಮಾಣದಲ್ಲಿ ಜಾನುವಾರುಗಳನ್ನು ಹೊಂದಿರುವುದಿಲ್ಲ. ಅದೇ ತಲ್ಲೂಕಿನ ಕಂದನಕೋವಿ ಹಾಗೂ ಸುತ್ತಮುತ್ತಲಿನ 5 ಗ್ರಾಮಗಳು 2007ರ ಜಾನುವಾರು ಗಣತಿಯಂತೆ ಒಟ್ಟು 7457 ಜಾನುವಾರುಗಳನ್ನು ಹೊಂದಿರುತ್ತದೆ. ಕಂದನಕೋವಿ ಪಂಚಾಯಿತಿ ಕೇಂದ್ರವಾಗಿದ್ದು, ಸುತ್ತಮುತ್ತಲಿನ 5 ಗ್ರಾಮಗಳಿಗೆ ಕೇಂದ್ರಸ್ಥಾನದಲ್ಲಿದ್ದು ರಾಷ್ಟ್ರೀಯ ಕೃಷಿ ಆಯೋಗದ ಶಿಫಾರಸ್ಸಿನಂತೆ ನಿಗದಿತ ಪ್ರಮಾಣದ ಜಾನುವಾರುಗಳನ್ನು ಹೊಂದಿರುತ್ತದೆ. ಕಂದನಕೋವಿ ಗ್ರಾಮದಲ್ಲಿ ಪಶುಚಿಕಿತ್ಸಾಲಯ ಪ್ರಾರಂಭಸಿದಲ್ಲಿ ಕಂದನಕೋವಿ ಒಳಗೊಂಡಂತೆ ಸುತ್ತಮುತ್ತಲಿನ 5 ಗ್ರಾಮಗಳ ರೈತಾಪಿ ವರ್ಗಕ್ಕೆ ಹಾಗೂ ಜಾನುವಾರುಗಳ ಚಿಕಿತ್ಸೆಗೆ ಅನುಕೂಲವಾಗುವುದಲ್ಲದೇ ಆ ಗ್ರಾಮಗಳಿಗೆ ಪಶುವೈದ್ಯಕೀಯ ಸೇವೆಗಳನ್ನು ವಿಸ್ತರಿಸಿದಂತಾಗುತ್ತದೆ. ಸ್ಥಳಾಂತರದಿಂದ ಸರ್ಕಾರಕ್ಕೆ ಯವುದೇ ರೀತಿಯ ಆರ್ಥಿಕ ಹೊರೆಯಾಗುವುದಿಲ್ಲ ಹಾಗೂ ಈಗಾಗಲೇ ನಿಗದಿಪಡಿಸಿರುವ ಅನುದಾನದಲ್ಲಿಯೇ ಸಿಬ್ಬಂದಿ ಖರ್ಚು–ವೆಚ್ಚ ಹಾಗೂ ಇತರೆ ವೆಚ್ಚಗಳನ್ನು ಭರಿಸಬಹುದಾಗಿದ್ದು ಹೆಚ್ಚಿನ ಅನುದಾನದ ಅವಶ್ಯಕತೆ ಇರುವುದಿಲ್ಲ. ಈ ದಿಸೆಯಲ್ಲಿ ಸರ್ಕಾರ ಜಾನುವಾರುಗಳ ಚಿಕಿತ್ಸೆ ಹಾಗೂ ಸಿಬ್ಬಂದಿ ಮತ್ತು ನಿರ್ವಹಣೆ ದೃಷ್ಟಿಯಿಂದ ದೊಡ್ಡರಂಗವ್ವನಹಳ್ಳಿ ಗ್ರಾಮಕ್ಕೆ ಮಂಜೂರಾಗಿರುವ ಪಶುಚಿಕಿತ್ಸಾಲಯವನ್ನು ಸಿಬ್ಬಂದಿ ಸಮೇತ ಕಂದನಕೋವಿ ಗ್ರಾಮಕ್ಕೆ ಸ್ಥಳಾಂತರಿಸಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸಾರ್ವಜನಿಕ ಹಿತದೃಷ್ಟಿಯಿಂದ ದಾವಣಗೆರೆ ತಾಲ್ಲೂಕಿನ ದೊಡ್ಡರಂಗವ್ವನಹಳ್ಳಿ ಗ್ರಾಮಕ್ಕೆ ಮಂಜೂರಾಗಿರುವ ಪಶುಚಿಕಿತ್ಸಾಲಯವನ್ನು ಮಂಜೂರಾದ ಸಿಬ್ಬಂದಿ ಸಮೇತ (ಪಶುವೈದ್ಯಾಧಿಕಾರಿ – 1 ಹುದ್ದೆ, ಪಶುವೈದ್ಯಕೀಯ ಪರೀಕ್ಷಕರು – 1 ಹುದ್ದೆ, "ಡಿ" ದರ್ಜೆ ನೌಕರರು –2 ಹುದ್ದೆ) ಅದೇ ತಾಲ್ಲೂಕಿನ ಕಂದನಕೋವಿ ಗ್ರಾಮಕ್ಕೆ ಸ್ಥಳಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಪಿ. ನಾಗರಾಜ**

ಪಿ.ಆರ್. 2293 ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, (ಪಶುಸಂಗೋಪನೆ–ಎ)

## ಕಾರ್ಮಿಕ ಸಚಿವಾಲಯ

**ವಿಷಯ:** ಕರ್ನಾಟಕ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳನ್ನು ಜಾರಿಗೊಳಿಸುವ ಹಿನ್ನೆಲೆಯಲ್ಲಿ ಅಂಗವಿಕಲ ಮತ್ತು ಪ.ಜಾ/ಪ.ಪಂ ವಿಶೇಷ ಉದ್ಯೋಗ ವಿನಿಮಯ ಕೇಂದ್ರಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅದೇಶ ಸಂಖ್ಯೆ: ಕಾಇ 7 ಇಟಿಎಂ 2004 ದಿನಾಂಕ: 25–05–2005
2. ದಿನಾಂಕ: 10–08–2006ರಂದು ಅಪರ ಮುಖ್ಯಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು
3. ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರ ಸಂಖ್ಯೆ: ಉತನಿ/ಉದ್ಯೋಗ/ ಆಡಳಿತ–1/ವಿವ–82/2006–07 ದಿನಾಂಕ: 27–06–2008

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಮತ್ತು ರಾಜ್ಯ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಈ ಎರಡು ಕಛೇರಿಗಳನ್ನು ಹಾಗೂ ಹೆಚ್ಚುವರಿಯೆಂದು ಗುರುತಿಸಿರುವ ಹುದ್ದೆಗಳನ್ನು ಮುಕ್ತಾಯಗೊಳಿಸುವಂತೆ ತೀರ್ಮಾನಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಅಪರ ಮುಖ್ಯಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳಲ್ಲಿ ಈ ಕೆಳಕಂಡ ಘಟಕಗಳನ್ನು ಉಳಿಸಿಕೊಳ್ಳುವ ಬಗ್ಗೆ ಮರು ಪರಿಶೀಲಿಸಲು ತೀರ್ಮಾನಿಸಲಾಗಿದೆ.

| | |
|---|---|
| 1 | ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ ಬೆಂಗಳೂರು |
| 2 | ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗಗಳ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು |

ಮೇಲೆ (3) ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಮತ್ತು ರಾಜ್ಯ ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗಗಳ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಈ ಎರಡೂ ಕಛೇರಿಗಳನ್ನು ದಿನಾಂಕ 10–08–2006 ರ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳಲ್ಲಿ ತೀರ್ಮಾನಿಸಲಾದಂತೆ ಮುಂದುವರೆಸಲಾಗಿದ್ದು, ಇದುವರೆಗೂ ಮುಚ್ಚಲಾಗಿರುವುದಿಲ್ಲ ಎಂದು ತಿಳಿಸಿ, ಸದರಿ ಎರಡು ಕಛೇರಿಗಳನ್ನು ಮುಂದುವರೆಸುವ ಬಗ್ಗೆ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 44 ಇಟಿಎಕ್ಸ್ 2008, ಬೆಂಗಳೂರು, ದಿನಾಂಕ: 30ನೇ ಸೆಪ್ಟಂಬರ್ 2009**

ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಹಾಗೂ ರಾಜ್ಯ ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗಗಳ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಈ ಎರಡು ಕಛೇರಿಗಳನ್ನು ದಿನಾಂಕ 10–08–2006 ರ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳನ್ವಯ ಈ ಹಿಂದೆ ಇದ್ದ ಅಧಿಕಾರಿ ಸಿಬ್ಬಂದಿಯೊಂದಿಗೆ ಮುಂದುವರೆಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2294

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ ಸಾಲ – ಅಸಲು ಮತ್ತು ಬಡ್ಡಿಯ ಮರುಪಾವತಿಗಾಗಿ 2009 ಸೆಪ್ಟೆಂಬರ್ ಅಂತ್ಯದ 19ನೇ ಕಂತಿನ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 22 ಪಿಆರ್‌ಎಂ 2002, ದಿನಾಂಕ: 6–3–2003.
2. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 07 ಪಿಆರ್‌ಎಂ 2009, ದಿನಾಕ: 25–6–2009.
3. ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್‌ರವರ ಪತ್ರ ಸಂಖ್ಯೆ: ಕೆಬಿಟ್ಸ್/ಎಸಿಟಿ/97/2002–2003, ದಿನಾಂಕ: 09–09–2009.
4. ನಿರ್ದೇಶಕರು, ಮಾತಂ ಜೈತಂ ನಿರ್ದೇಶನಾಲಯರವರ ಪತ್ರ ಸಂಖ್ಯೆ: ಮಾತಂನಿ/ಲೆಕ್ಕ–1/ಹುಡ್ಕೋ ಸಾಲ/452/2009–10, ದಿನಾಂಕ: 14–09–2009.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 6–3–2003ರಲ್ಲಿ ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ [Housing and Urban Development Corporation], ಸಂಸ್ಥೆಯಿಂದ ರೂ. 20.00 ಕೋಟಿ ಸಾಲವನ್ನು ಎತ್ತುವಳಿ ಮಾಡಲು ಮಂಜೂರಾತಿ ನೀಡಲಾಗಿತ್ತು.

2005ನೇ ವರ್ಷದಿಂದ ಹುಡ್ಕೋ ಸಂಸ್ಥೆಯ ಅಸಲು, ಬಡ್ಡಿಯ ಮರುಪಾವತಿಸಲು ಕೆಬಿಟ್ಸ್ ಸಂಸ್ಥೆಗೆ ತ್ರೈಮಾಸಿಕ ಅನುದಾನಗಳನ್ನು ಸರ್ಕಾರವು ಆಗಿಂದಾಗ್ಗೆ ಬಿಡುಗಡೆ ಮಾಡುತ್ತಲಿದೆ.

2009–10ನೇ ಸಾಲಿನ ಆಯವ್ಯಯದಲ್ಲಿ ಸದರಿ ಸಾಲವನ್ನು ಮರುಪಾವತಿಸಲು ಲೆಕ್ಕಶೀರ್ಷಿಕೆ **'5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ'** ಇದರ ಅಡಿಯಲ್ಲಿ ರೂ. 360.00 ಲಕ್ಷ ಒದಗಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹುಡ್ಕೋ ಸಾಲದ ಬಾಬ್ತು ಹುಡ್ಕೋ ಸಂಸ್ಥೆಗೆ ಅಸಲು ಮತ್ತು ಬಡ್ಡಿಯ ಬಾಬ್ತು ಪಾವತಿಸಲು ದಿನಾಂಕ 30–06–2009ರ ಅಂತ್ಯದ 18ನೇ ತ್ರೈಮಾಸಿಕ ಕಂತಿನ ಹಣ ರೂ. 85,22,328/–ಗಳ ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (4) ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಪತ್ರ ಮತ್ತು (3) ರಲ್ಲಿ ಓದಲಾದ ಕೆಬಿಟ್ಸ್ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರ ಪತ್ರದಲ್ಲಿ ಹುಡ್ಕೋ ಸಂಸ್ಥೆಗೆ 19ನೇ ಕಂತಿನ ಬಾಬ್ತು ಅಸಲು ಮತ್ತು ಬಡ್ಡಿ ಬಾಬ್ತು ರೂ. 83,97,943/– ಗಳನ್ನು 2009ರ ಸೆಪ್ಟಂಬರ್ ಅಂತ್ಯದೊಳಗಾಗಿ ಪಾವತಿ ಮಾಡಬೇಕಾಗಿರುತ್ತದೆಂದು ತಿಳಿಸುತ್ತಾ, ಸದರಿ ಮೊತ್ತವನ್ನು ಬಿಡುಗಡೆ ಮಾಡಲು ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 07 ಪಿಆರ್‌ಎಂ 2009, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಹುಡ್ಕೋ ಸಾಲದ ಬಾಬ್ತು ಹುಡ್ಕೋ ಸಂಸ್ಥೆಗೆ ಅಸಲು ಮತ್ತು ಬಡ್ಡಿಯ ಬಾಬ್ತು ಪಾವತಿಸಲು ದಿನಾಂಕ 30–09–2009ರ ಅಂತ್ಯದ 19ನೇ ತ್ರೈಮಾಸಿಕ ಕಂತಿನ ಹಣ ರೂ. 83,97,943/–ಗಳ [ಎಂಬತ್ಮೂರು ಲಕ್ಷದ ತೊಂಬತ್ತೇಳು ಸಾವಿರದ ಒಂಬೈನೂರಾ ನಲವತ್ಮೂರು ರೂಪಾಯಿಗಳು ಮಾತ್ರ] ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ'** ಇದರ ಅಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಸದರಿ ಅನುದಾನದ ಬಳಕೆಯ ಬಗ್ಗೆ ಕೆಬಿಟ್ಸ್ ಸಂಸ್ಥೆಯ ಅಪರ ವ್ಯವಸ್ಥಾಪಕ ನಿರ್ದೇಶಕರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008 ಇದರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 2295 ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ವಿಷಯ:** 'ಬೆಂಗಳೂರು ಐ.ಟಿ.ಬಿಜ್–2009'ರ ಕಾರ್ಯಕ್ರಮದ ಅಂಗವಾಗಿ ಏರ್ಪಡಿಸಲಾಗಿರುವ ಮಾಹಿತಿ ತಂತ್ರಜ್ಞಾನದಲ್ಲಿ ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ ಕಾರ್ಯಕ್ರಮಕ್ಕೆ ಅನುದಾನ ಬಿಡುಗಡೆ ಬಗ್ಗೆ – ಆದೇಶ.

**ಪ್ರಸ್ತಾವನೆ:**

ಮಾತಂ ಜೈತಂ ಹಾಗೂ ವಿತಂ ಇಲಾಖೆಯು ಏರ್ಪಡಿಸುತ್ತಿದ್ದ ರಾಜ್ಯಾದ್ಯಂತ ಗ್ರಾಮೀಣ ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ ಕಾರ್ಯಕ್ರಮವನ್ನು ಪ್ರತಿ ವರ್ಷದಂತೆ ಬೆಂಗಳೂರು ಐ.ಟಿ.ಬಿಜ್ 2009 ಮೇಳದ ಅಂಗವಾಗಿ ಈ ವರ್ಷವೂ ಏರ್ಪಡಿಸಲಾಗುತ್ತಿದೆ.

2009ನೇ ಸಾಲಿನಲ್ಲಿ ಹಮ್ಮಿಕೊಳ್ಳುವ **'ಬೆಂಗಳೂರು ಐ.ಟಿ.ಬಿಜ್ – 2009'** ಮೇಳದ ಅಂಗವಾಗಿ ವಿದ್ಯಾರ್ಥಿಗಳಲ್ಲಿ ಅಂತರ್ಜಾಲ ಪ್ರಪಂಚದ ಪ್ರಯೋಜನಗಳು ಮತ್ತು ಇತ್ತೀಚಿನ ದಿನಗಳಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಉಂಟಾಗಿರುವ ತಂತ್ರಜ್ಞಾನ ಬದಲಾವಣೆಗಳ ಅರಿವು ಮೂಡಿಸುವ ಸಲುವಾಗಿ **'ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ'** ಕಾರ್ಯಕ್ರಮವನ್ನು ನಡೆಸುವ ಉದ್ದೇಶಕ್ಕಾಗಿ ಸಾರಿಗೆ, ಊಟ, ಮತ್ತು ಸಭಾಂಗಣದ ಕಾರ್ಯಕ್ರಮಕ್ಕೆ ಸಂಬಂಧಿಸಿದ ಇನ್ನಿತರೆ ವೆಚ್ಚಗಳನ್ನು ಬರಿಸುವ ಸಲುವಾಗಿ ರಾಜ್ಯದ ಎಲ್ಲಾ 29 ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನವನ್ನು ಬಿಡುಗಡೆ ಮಾಡಲು ಪ್ರತಿ ಜಿಲ್ಲೆಗೂ ರೂ. 1.00 ಲಕ್ಷಗಳ ಅನುದಾನದಂತೆ ಒಟ್ಟು ರೂ. 29.00.000/– ಗಳ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 29 ಅಚವಿ 2009, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು **'ಬೆಂಗಳೂರು ಐ.ಟಿ.ಬಿಜ್ – 2009'** ರ ಮೇಳದ ಅಂಗವಾಗಿ **'ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ'** ಕಾರ್ಯಕ್ರಮವನ್ನು ನಡೆಸಲು ಪ್ರತಿ ಜಿಲ್ಲೆಗೆ ರೂ. 1.00 ಲಕ್ಷದಂತೆ ರಾಜ್ಯದ ಎಲ್ಲಾ 29 ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನವನ್ನು ಬಿಡುಗಡೆ ಮಾಡಲು ಒಟ್ಟು ರೂ. 29,00,000/– ಗಳ (ಇಪ್ಪತ್ತೊಂಬತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ – 059 – ಇತರೆ ಖರ್ಚು (ಯೋಜನೆ)" ಇದರಡಿಯಲ್ಲಿ** ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರಗಳನ್ನು ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳಿಂದ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 2296

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎನ್.ಸಿ.ಗಣೇಶ್, ಪ್ರೊ ಪಿ.ಎಸ್.ಐ ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: 115/ಸಿಬ್ಬಂದಿ–1/2008–09, ದಿನಾಂಕ: 07–05–2009 ಮತ್ತು 01–07–2009.

**ಪ್ರಸ್ತಾವನೆ:**

ಶ್ರೀ ಎನ್.ಸಿ.ಗಣೇಶ್ ರವರು ಪಿ.ಎಸ್.ಐ. (ಸಿವಿಲ್) ಹುದ್ದೆಗೆ ನೇಮಕಾತಿ ಹೊಂದಿ ತಮ್ಮ ಪರೀಕ್ಷಾರ್ಥ ಅವಧಿಯಲ್ಲಿ ನಿಗಧಿತ ಇಲಾಖಾ ಪರೀಕ್ಷೆಯಾದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗದ ಕಾರಣ ನೇಮಕಾತಿ ಪ್ರಾಧಿಕಾರವು ಕೆ.ಸಿ.ಎಸ್ (ಪ್ರೊಬೇಷನ್) ನಿಯಮ 1977ರ ನಿಯಮ 4(1)(ii) ರನ್ವಯ ದಿನಾಂಕ 30–06–2004 ರಿಂದ 29–09–2005 ರವರೆಗೆ ಖಾಯಂ ಪೂರ್ವ ಅವಧಿಯನ್ನು ವಿಸ್ತರಿಸಿರುತ್ತದೆ. ವಿಸ್ತರಿತ ಅವಧಿಯಲ್ಲಿಯೂ ಸಹ ಇವರು ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದಿಲ್ಲ. ಆದ್ದರಿಂದ ವಲಯಾಧಿಕಾರಿಗಳು ಕೆ.ಸಿ.ಎಸ್ (ಪ್ರೊಬೇಷನ್) ನಿಯಮ 4(1)(ii) ರನ್ವಯ ಸದರಿ ಪಿ.ಎಸ್.ಐ ರವರ ಪ್ರೊಬೇಷನರಿ ಅವಧಿಯನ್ನು ದಿನಾಂಕ 15–03–2006 ರಿಂದ 14–06–2007 ರವರೆಗೆ ವಿಸ್ತರಿಸಿರುತ್ತಾರೆ.

ಸದರಿಯವರು ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ದಿನಾಂಕ: 25–11–2007 ರಂದು ಉತ್ತೀರ್ಣರಾಗಿದ್ದು, ಇವರ ವಿರುದ್ಧ ಯಾವುದೇ ಚಾಲ್ತಿ ಶಿಕ್ಷೆ / ಇಲಾಖಾ ವಿಚಾರಣೆ / ಕ್ರಿಮಿನಲ್ ಮೊಕದ್ದಮೆಗಳು ಬಾಕಿ ಇರುವುದಿಲ್ಲವೆಂದು ಹಾಗೂ

ಕೆ.ಸಿ.ಎಸ್. (ಪರಿವೀಕ್ಷಣಾ) ನಿಯಮ, 1977ರ ನಿಯಮ 4 ಮತ್ತು 5 (1) ರನ್ವಯ ಪಿ.ಎಸ್.ಐ. ಕಾರ್ಯಭಾರವನ್ನು ನಿರ್ವಹಿಸಲು ಸಮರ್ಥರಾಗಿರುತ್ತಾರೆಂದು ತಿಳಿಸಿ ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 30–09–2005 ರಿಂದ 25–11–2007 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1)(i) ರನ್ವಯ ವಿಸ್ತರಿಸುವಂತೆ ಮೇಲೆ ಓದಲಾದ (1) ರ ಪತ್ರದಲ್ಲಿ ಕೋರಲಾಗಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 176 ಪೊಸಇ 2009, ಬೆಂಗಳೂರು, ದಿನಾಂಕ: 30ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1)(i) ರನ್ವಯ ಶ್ರೀ ಎನ್.ಸಿ.ಗಣೇಶ್, ಪಿ.ಎಸ್.ಐ. ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 30–09–2005 ರಿಂದ 25–11–2007 ರವರೆಗೆ ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2297

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ:** ಕಂದಾಯ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗ್ರಾಮಸಹಾಯಕರ ಮಾಸಿಕ ಮಿತವೇತನವನ್ನು ರೂ. 2000/– ಗಳಿಂದ ರೂ. 3000/– ಗಳಿಗೆ ಹೆಚ್ಚಿಸಿರುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಂ.ಇ. 01ಬಿಎಸ್.ಸಿ.2005, ದಿನಾಂಕ: 08–08–2005.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 01ಬಿಎಸ್.ಸಿ.2005, ಬೆಂಗಳೂರು ದಿನಾಂಕ: 10–07–2007.

**ಪ್ರಸ್ತಾವನೆ:**

ಕಂದಾಯ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗ್ರಾಮಸಹಾಯಕರ ಮಾಸಿಕ ಮಿತವೇತನವನ್ನು ಮೊದಲಿಗೆ ಮಾಸಿಕವಾಗಿ ಪ್ರತಿ ತಿಂಗಳಿಗೆ ರೂ. 100–00 ರಂತೆ ಮಿತವೇತನದ ರೂಪದಲ್ಲಿ ನೀಡಲಾಗುತ್ತಿತ್ತು. ತದನಂತರ ಈ ಮೊತ್ತವನ್ನು ಕಾಲಕಾಲಕ್ಕೆ ಹೆಚ್ಚಿಸುತ್ತಾ ಬಂದು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ದಿನಾಂಕ: 08–08–2005 ರಲ್ಲಿ ಸದರಿ ಗ್ರಾಮಸಹಾಯಕರ ಮಾಸಿಕ ಮಿತವೇತನವನ್ನು ರೂ. 1000/–ದಿಂದ ರೂ. 2000/–ಗಳಿಗೆ ಹೆಚ್ಚಿಸಿ ಆದೇಶ ಹೊರಡಿಸಲಾಗಿದೆ.

ಗ್ರಾಮ ಸಹಾಯಕರ ಸಂಘವು ಗ್ರಾಮ ಸಹಾಯಕರನ್ನು ಗ್ರೂಪ್–ಡಿ ನೌಕರರೆಂದು ಪರಿಗಣಿಸಿ ವೇತನ ಶ್ರೇಣಿ ನೀಡುವಂತೆ ಕೋರಿರುತ್ತಾರೆ. 2009–10ನೇ ಸಾಲಿನ ಆಯವ್ಯಯದ ಮೇಲಿನ ಚರ್ಚೆ ಸಂದರ್ಭದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಉತ್ತರ ನೀಡುವ ಸಮಯದಲ್ಲಿ ಘೋಷಿಸಿರುವ ಹೆಚ್ಚುವರಿ ಅಂಶಗಳ ಪಟ್ಟಿಯಲ್ಲಿನ ಮೂರನೇ ಅಂಶದಲ್ಲಿ ಪ್ರಸ್ತುತ ಗ್ರಾಮ ಸಹಾಯಕರು ಪಡೆಯುತ್ತಿರುವ ಗೌರವಧನವನ್ನು ರೂ.2000/– ರಿಂದ ರೂ.3000/–ಗಳಿಗೆ ಹೆಚ್ಚಿಸಲಾಗುವುದು ಘೋಷಿಸಿದ್ದು, ಅದರಂತೆ ಸದರಿ ಗ್ರಾಮ ಸಹಾಯಕರ ಮಾಸಿಕ ಸಂಭಾವನೆಯನ್ನು ಏಪ್ರಿಲ್ 2009 ರಿಂದ ಜಾರಿಗೆ ಬರುವಂತೆ ರೂ. 3000/– ಗಳಿಗೆ ಹೆಚ್ಚಿಸಲು ಸಚಿವ ಸಂಪುಟವು ದಿನಾಂಕ: 04–08–2009 ರಂದು ಅನುಮೋದನೆ ನೀಡಿದ್ದು, ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 474 ಬಿಎಸ್.ಸಿ.2005, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಗ್ರಾಮಸಹಾಯಕರ ಮಿತವೇತನವನ್ನು ಏಪ್ರಿಲ್ 2009 ರಿಂದಲೇ ಅನ್ವಯಿಸುವಂತೆ ರೂ.2000/–ಗಳಿಂದ ರೂ.3000/–ರವರೆಗೆ (ರೂ. ಮೂರು ಸಾವಿರ ಮಾತ್ರಗಳಿಗೆ) ಹೆಚ್ಚಿಸಿ ಆದೇಶಿಸಿದೆ.

ಸದರಿ ಆದೇಶವನ್ನು ಸಚಿವ ಸಂಪುಟ ಟಿಪ್ಪಣಿ ಸಂಖ್ಯೆ: ಸಿ:366/2009 ದಿನಾಂಕ: 04–08–2009 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 440 ವೆಚ್ಚ–7/2008, ದಿನಾಂಕ: 05–06–2009ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಮಚಂದ್ರಯ್ಯ**

ಪಿ.ಆರ್. 2298

ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ, (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

## ಸಮಾಜ ಕಲ್ಯಾಣ ಸಚಿವಾಲಯ

### ಸೇರ್ಪಡೆ

**ಸಂಖ್ಯೆ:ಸಕಇ 208 ಬಿಎಂಎಸ್ 2009, ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್ 2009**

ಕಾನೂನು ಪದವೀಧರರ ತರಬೇತಿಗೆ ಆಯ್ಕೆಯಾದ ಮಹಿಳಾ ಅಭ್ಯರ್ಥಿಗಳು ತರಬೇತಿ ಅವಧಿಯಲ್ಲಿ ಗರ್ಭಿಣಿ ಸ್ಥಿತಿಯಲ್ಲಿರುವ ಅಭ್ಯರ್ಥಿಗಳಿಗೆ ಕರ್ನಾಟಕ ಸರ್ಕಾರಿ ಸೇವೆಯಲ್ಲಿರುವ ನೌಕರರಿಗೆ ನೀಡುವಂತೆ 135 ದಿನಗಳ ಅವಧಿಗೆ ವಿಶೇಷ ರಜೆ ಮಂಜೂರು ಮಾಡಿ, ಇಷ್ಟೇ ಅವಧಿಗೆ ಇವರ ತರಬೇತಿಯನ್ನು ಮುಂದೂಡಿ(ತರಬೇತಿ ಭತ್ಯೆ ರಹಿತ ರಜೆ) 4 ವರ್ಷಗಳ ತರಬೇತಿ ಅವಧಿಯಲ್ಲಿ ಒಂದು ಬಾರಿ ಮಾತ್ರ ವೈದ್ಯಕೀಯ ಪ್ರಮಾಣ ಪತ್ರ ಪಡೆದು ಮಂಜೂರು ಮಾಡಲು ಸರ್ಕಾರದ ಆದೇಶ ಸಂ:ಎಸ್‌ಡಬ್ಲೂಎಲ್ 68 ಎಸ್‌ಇಡಬ್ಲೂ 89, ದಿನಾಂಕ 02.11.1990ರ ನಿಯಮಕ್ಕೆ ಸೇರ್ಪಡೆ ಮಾಡಿ ಆದೇಶಿಸಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ಅನುಬಂಧ–1 ರಲ್ಲಿರುವಂತೆ ಪರಿಷ್ಕೃತ ಮಾರ್ಗಸೂಚಿಗಳನ್ವಯ ಕ್ರಮ ಜರುಗಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ. ಬಾಟೆ**

ಸರ್ಕಾರದ ಅಧೀನ ಕಾರ್ಯದರ್ಶಿ–3, ಸಮಾಜ ಕಲ್ಯಾಣ ಇಲಾಖೆ.

## ANNEXURE TO GOVERNMENT ORDER NO.
## SWL 68 SEW 89, Dated 02.11.1990

SCHEME FOR GIVING TRAINING TO LAW GRADUATES BELONGING TO SCHEDULED CASTES/SCHEDULED TRIBES/OTHER BACKWARD CLASSES.

**I. DETAILS OF SCHEME:**

1) In this Scheme the eligible law graduates will be selected for training with the District Public prosecutor/Government advocate or any Advocate who has put in not less than 20 years of service in the profession both in Civil & Criminal matters of the purpose of training.
2) The training shall be given in the respective district.
3) All eligible Candidates to be trained.
4) Income limit shall be as prescribed by the Govt. in separate orders from time to time.

**II. SELECTION COMMITTEE:**

5) The selection of the candidates shall be made at the District level by a Selection Committee consisting of:

| | | |
|---|---|---|
| 1 | Chief Executive Officer of the Zilla Panchayath | Chairman |
| 2 | President of the Bar Association | Member |
| 3 | District Public Prosecutor | Member |
| 4 | Secretary of District Legal Aid Board | Member |
| 5 | District Government Pleader | Member |
| 6 | District Social Welfare Officer for Social Welfare in case of SC/ST and District Backward Classes and Minorities Welfare Officer in case of BC Candidates. | Member Secretary |

**III. ELIGIBILITY CRITERIA & CONDITIONS FOR SELECTION:**

6)(a) The member Secretary shall, with the approval of the Committee, invite applications from Graduates in Law belonging to Scheduled Caste/Scheduled Tribe and Backward Classes in the month of June by which time the results of the Law Degree Examination held in the month of March/April by the concerned University, would have been announced.

(b) Notification calling applications shall be given wide publicity. It shall be published in the Karnataka Gazette and in the local news paper the Notification should also be displayed on the Notice Boards of the Office of the Deputy Commissioner, Zilla Panchayath and District/Association of the concerned Districts.

(c) Last date for receipt of applications shall be one month, from the date it is published in the Gazette.

(d) The maximum age limit shall be 30 years as on the last date fixed for receipt of applications. This limit is relaxable by one year in the case of Scheduled Castes / Scheduled Tribes and Category-I of BCs. The maximum age limit shall also be relaxable by five years as Special Case in respect of candidates belonging to Scheduled Castes/Scheduled Tribes and Cat-I.

(e) The applications received shall be scrutinized by the Member-Secretary, Incomplete applications/belated applications/applications which do not fulfill all the requirements, shall be rejected.

(f) The applicants, whose applications are in order, shall be called for an interview by the Member-Secretary, on the date, time and place fixed by the Selection Committee.

7) The Committee shall interview the candidates after assessing their suitability select the required number of candidates belonging to scheduled castes, scheduled tribes and backward classes among backward classes the candidates belonging to Category-I, 2A, 3A and 3B shall be selected at the ratio of 15%, 53%, 15% and 17% respectively, subject to a minimum of two candidates from Cat-I, if no suitable candidates are available in any category then the selection has to be made from the category in which applications are available based on the above percentage. The committee shall also prepare a Reserve list, which could be operated in case the selected candidate does not report for training or leaves in the middle of the training.

8) The Committee shall chalk out a detailed training programme to be imparted to the candidate, which would ensure that the candidate gets a fair knowledge in the art of advocacy and in the administration of justice.

9)(a) The District Officer shall inform the selected candidate about his, selection for training, the duration of training, the stipend that will be paid during training, giving him 15 days time to indicate his acceptance. The selected candidate shall have to execute an agreement to the effect that he will not leave the training in the middle.

(b) If the selected candidate does not indicate his acceptance within the stipulated time or reject the offer, his selection shall be cancelled and the next person in the order of merit in the reserve list shall be selected.

10) On receipt of acceptance of the candidate the District Officer, Backward Classes and Minorities Welfare/ District Social Welfare Officer will issue an Official Memorandum deputing the candidate for training. The Official memorandum shall specify, the date from when the training starts, the authority to whom he should report for training, the training schedule, stipend that will be paid during the training and other relevant particulars.

11) Only candidates who have passed the required Law Degree Examinations, within a period of three years prior to the last date fixed for receipt of applications shall be eligible for selection for training. The candidates shall furnish all such certificates as may be required by the Secretary, Selection Committee along with the application.

**IV. LEAVE DURING THE TRAINING PERIOD:**

12) The absence of the candidate for a period of 15 days per year for reasons beyond his control is allowed. In case of female candidates who are selected for training & maximum of 90 days of maternity leave shall be sanctioned on production of medical certificate and their training shall be extended to such period. This leave shall be sanctioned for one time in the entire duration

of the training period, however stipend shall not be paid for the leave period. The authority under whom the candidate is receiving training at the relevant period of absence shall be competent to sanction this absence.

**V. PAYMENT OF STIPEND:**

13) The period of training is four years and the candidates shall be paid a stipend of Rs.1000/- per month, during this period.

14) The Member Secretary of the Selection Committee shall take necessary steps to draw the stipend and other fees and disburse the same to the candidates as far as possible in the first week of succeeding month, after getting necessary reports from the concerned authority under whom the candidate is being trained. He shall issue a sanction order, prepare the DC bill and submit the same to the treasury. After receiving the cheques from the treasury, the cheques shall be issued to the trainees with proper acknowledgement. The Member Secretary may require the candidates to furnish such certificates, periodical returns and reports as may be necessary for the effective implementation of the training scheme. The stipend, to the selected candidates who are yet to join bar, shall be released only after their enrollment.

15) The stipend shall be paid to the candidates provided they satisfy the conditions prescribed for selection for training.

16) The Member Secretary may, with the approval of the Chairman, withhold payment of stipend to any candidate, where a complaint has been received to the effect that the candidate has furnished false certificates required or has discontinued the training without due information, mis-conduct etc.,. The Chairman may order for the release of the with-hold stipend amount on receipt of representation from such candidate, provided he is satisfied that there is no lapse on the part of the candidate.

17) The selected candidate shall, after refunding the amount paid to him obtain prior permission of Government in the event of his intention to discontinue the training before completion of 4 years period of training. Government may permit him to do so subject to the general instructions or orders as may be issued in this behalf. Where a candidate discontinues the training in connection with his appointment to a post in the administration of Justice, the Government will exempt the trainee from payment of full or any part of refundable amount.

In other cases, the Government shall require the Trainee to refund the amount paid to him/her. However in deserving cases, the Government may after recording reasons exempt any trainees from payment of full or any part of the refundable amount if the candidates gets an appointment in State/Central Government or under training etc.,.

18) The selected candidates shall not leave the training in the middle failing which entire amount will be recovered with interest thereon.

**VI. FURNISHING OF FALSE INFORMATION:**

19) The candidates are liable of prosecution for furnishing false certificates and information. In addition they are liable to refund the entire amount paid to them with prevailing rate of interest. Following which the dues are recoverable as arrears of land revenue. The Secretary shall obtain an agreement from each candidate on his selection regarding recovery of the amount.

**M.M. BHATTE**

P.R. 2153

Under Secretary to Government-3,
Social Welfare Department

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಯ (Empanelment) ಕುರಿತು.

**ಓದಲಾಗಿದೆ:** 1. ದಿನಾಂಕ 25.07.2009ರ ಟೆಂಡರ ಪ್ರಕಟಣೆ ಸಂಖ್ಯೆ ಸಿಆಸುಇ 30 ವಿಮಾಆ 2008.

2. ದಿನಾಂಕ 29.07.2009ರ ಟೆಂಡರ ಪ್ರಕಟಣೆ ಸಂಖ್ಯೆ ಸಿಆಸುಇ 30 ವಿಮಾಆ 2008.

3. ದಿನಾಂಕ 08.09.2009ರಂದು ನಡೆದ ರಾಜ್ಯ ಮಟ್ಟದ ತಾಂತ್ರಿಕ ಸಲಹಾ ಸಮಿತಿಯ ಉಪಸಮಿತಿಯ ನಡೆವಳಿ.

4. ದಿನಾಂಕ 29.09.2009ರಂದು ನಡೆದ ರಾಜ್ಯ ಮಟ್ಟದ ತಾಂತ್ರಿಕ ಸಲಹಾ ಸಮಿತಿಯ ನಡೆವಳಿ.

**ಪ್ರಸ್ತಾವನೆ:**

1. ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರುಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ದಪಡಿಸುವಿಕೆ, ನೆಟ್ ವರ್ಕಿಂಗ್, ಯು.ಪಿ.ಎಸ್, ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಉಪಕರಣ/ಸಾಮಗ್ರಿ/ಸೇವೆಗಳನ್ನು ಪೂರೈಸುವುದಕ್ಕಾಗಿ ಸೂಕ್ತ ಸರಬರಾಜು ಸಂಸ್ಥೆಗಳಿಂದ ಅರ್ಜಿಗಳನ್ನು ಮೇಲೆ (1) ಹಾಗೂ (2)ರಲ್ಲಿ ಓದಲಾದ ಟೆಂಡರ ಪ್ರಕಟಣೆಗಳ ಮೂಲಕ ಕರೆಯಲಾಗಿತ್ತು. ನಾನಾ ಸಂಸ್ಥೆಗಳು ಸಲ್ಲಿಸಿದ ಅರ್ಜಿಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ) ಯವರ ಅಧ್ಯಕ್ಷತೆಯಲ್ಲಿ ರಚಿತವಾಗಿರುವ ರಾಜ್ಯ ಮಟ್ಟದ ತಾಂತ್ರಿಕ ಸಲಹಾ ಸಮಿತಿಯ ಉಪಸಮಿತಿಯು ಪರಿಶೀಲಿಸಿ, ಅರ್ಹವಾದ ಸಂಸ್ಥೆಗಳನ್ನು ವಿವಿಧ ವರ್ಗಗಳ ಮಾರಾಟಗಾರರ ನಮೂಧಿತ ಪಟ್ಟಿ (Empanelled Vendors' list)ಗೆ ಸೇರಿಸಲು ಮೇಲೆ (3)ರಲ್ಲಿ ಓದಲಾದ ಸಭಾ ನಡವಳಿಯ ಮೂಲಕ ಶಿಫಾರಸ್ಸು ಮಾಡಲಾಗಿದೆ. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ 29.09.2009ರಂದು ನಡೆದ ತಾಂತ್ರಿಕ ಸಲಹಾ ಸಮಿತಿಯು ಅಂತಿಮವಾಗಿ ಈ ಶಿಫಾರಸ್ಸು ಅನುಮೋದಿಸಿದೆ. ರಾಜ್ಯ ಮಟ್ಟದ ತಾಂತ್ರಿಕ ಸಲಹಾ ಸಮಿತಿಯು ಅನುಮೋದಿಸಿದ ಹೊಸ ಮಾರಾಟಗಾರರ ನಮೂಧಿತ ಪಟ್ಟಿಯನ್ನು ಹೊರಡಿಸಲು ಪ್ರಸ್ತಾಪಿಸಲಾಗಿದೆ.
2. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು, 2000ದ ನಿಯಮ 27ರನ್ವಯ(ಅದರಲ್ಲಿನ ಪರಂತುವೂ ಒಳಗೊಂಡಂತೆ) ಪೂರ್ವಅರ್ಹತೆ ಹೊಂದಿರುವ ಟೆಂಡರ್‌ದಾರರುಳ ಪಟ್ಟಿಯನ್ನು (list of pre qualified tenderers duly empanelled) ತಯಾರಿಸಿ, ಟೆಂಡರ್‌ಗಳನ್ನು ಕರೆಯಲು ಆಸ್ಪದ ಇರುತ್ತದೆ. ಈ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಈ ಮೂಲಕ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 30 ವಿಮಾಆ 2008, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್ 2009.**

3. ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ದಪಡಿಸುವಿಕೆ, ನೆಟ್ ವರ್ಕಿಂಗ್, ಯು.ಪಿ.ಎಸ್, ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಉಪಕರಣ/ಸಾಮಗ್ರಿ/ಸೇವೆಗಳನ್ನು ಪೂರೈಸುವುದಕ್ಕಾಗಿ ಅನುಬಂಧ 1ರಿಂದ 13ಗಳಲ್ಲಿ ತೋರಿಸಿದ ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಗೆ, ಅನುಬಂಧ–1 ಹಾಗೂ ಇತರ ಅನುಬಂಧಗಳಲ್ಲಿನ ಸೂಚನೆಗಳಿಗೆ ಒಳಪಟ್ಟು, ಈ ಮೂಲಕ ಸರ್ಕಾರದ ಅನುಮೋದನೆಯನ್ನು ನೀಡಿದೆ. ಇದರ ಸಿಂಧುತ್ವವು ದಿನಾಂಕ 31.12.2011ರಂದು ಕೊನೆಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಪಾತಲಿಂಗಯ್ಯ**

ಪೀಠಾಧಿಕಾರಿ–1,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಇ–ಆಡಳಿತ)

**Annexe-1**

**(Government Order No. DPAR 30 EGV 2008 dated 3rd October 2009.)**

**General instructions:**

**To Vendors:**

1. The empanelment of vendors under various categories does not mean guarantee for Government enquiries/orders.
2. The empanelled vendors can quote and supply approved items only.

3. The empanelled vendors cannot authorise their partners, other than approved partners, to quote on their behalf.
4. The empanelled vendor may authorise only one approved partner to quote on its behalf for a particular enquiry.
5. On receipt of the enquiry, if the empanelled vendor does not respond to the enquiry, such a empanelled vendor will be blacklisted as being non- responsive. If empanelled vendors cannot supply the required items, a regret letter with reason is must.
6. If the empanelled vendor sends more than two such regret letters in a row, it will be blacklisted.
7. After sales service will be the responsibility of the empanelled vendors either directly or through their authorised service centers.

**To User Departments:**

1. Departments should send their enquiries to all the empanelled vendors of the respective category.
2. Obtaining EMD, Bank Guarantee etc, from empanelled vendors shall be as per the provisions of the relevant law.
3. If any empanelled vendor does not respond or sends regret letter to an enquiry of a department, it shall report the same to the Principal Secretary to Government, DPAR(e-Governance) with complete details.
4. **If for any particular item, only one vendor has been empanelled, then the department concerned has to procure the same by inviting tenders/quotations as per the provisions of the Karnataka Transparency in Public Procurements Act 1999 and the rules made thereunder.**

**T. PATHALINGAIAH**
Desk Officer-1
Department of Personnel & Administrative Reforms (e-Governance).

**Annexe-2**

**(Government Order No. DPAR 30 EGV 2008 dated 3rd October 2009.)**

| **Cagegory - I - Computer Systems :** | | | **Valid up to 31.12.2011** | |
|---|---|---|---|---|
| **Sl. No** | **Address of the Vendor** | **Contact Person / Phone No / Fax. No. e-mail address** | **Authorised Partners** | **Approved items (Intel/AMD based)** |
| 1 | ACER INDIA (P) Ltd.<br># 873, 2nd Floor,<br>80 Feet Road,<br>Indiranagar<br>3rdStage,<br>Bengaluru-560038 | Shrihari R<br>Ph: 080-40708611<br>Ph: 080-40708600<br>Fax- 080-25219536<br>Cell: 9886104840<br>shrihari_r@acer.co.in | 1. CMS Info Systems Pvt Ltd,<br>2. Keltron (Only for Bengaluru R& U districts)<br>3. M/s Siddartha Enterprises | -Servers<br>-Personal Computers<br>-Laptops |
| 2 | HCL INFOSYSTEMS Ltd.<br>Shubharam Complex,<br>3rd Floor,<br># 144, M.G. Road,<br>Bengaluru-560001. | Santosh Kumar JJ /<br>M.N. Arun Kumar /<br>V. Anand<br>Ph. 080-25325958<br>Ph. 080-25584407<br>Fax: 080-25584061<br>Fax. 080-25583831<br>Cell: 9886221189<br>Santosh.jj@hcl.in | 1. Heritech Computers | -Servers<br>-Personal Computers<br>-Laptops<br>-Thin clients<br>- Information Kiosks |

| Sl. No | Address of the Vendor | Contact Person / Phone No / Fax. No. e-mail address | Authorised Partners | Approved items (Intel/AMD based) |
|---|---|---|---|---|
| 3 | HEWLETT-PACKARD INDIA SALES PVT LTD, # 24, Salarpuria arena, Hosur Main Road, Adugodi, Bengaluru-560030. | K. Ganesh Hebbar<br>Ph. 080-25633555<br>Fax-080-25633222<br>Cell: 98455 13600<br>ganesh.hebbar@hp.com | 1. Value Point Systems (P)Ltd<br>2. Precision Informatic Pvt Ltd<br>3. Unique Computers<br>4 .Pursuit Technologies Pvt Ltd<br>5. C.M.C Ltd | -Servers<br>-Personal Computers<br>-Laptops<br>-Thin clients<br>-Information Kiosks |
| 4 | Wipro Ltd, SB Chambers, # 88, M.G. Road, Bengaluru-560 001. | Shirish Dange<br>Ph. 080-39913816<br>Fax- 080-41144487<br>Cell. 9845332849<br>shirish.dange@wipro.com | ------- | -Servers<br>-Personal Computers<br>-Laptop |
| 5 | AGS INFOTECH PRIVATE LTD, # 103, SAMKRUTHI CHAMBERS, K.H. Road, Bengaluru-560027. | Surya Singh<br>Ph. 022 67812000<br>Fax- 022-24935384<br>Cell- 09323939495<br>e-mail: surya.singh@agsinfotech.com<br>Kapildev V Mutalik<br>Cell: 9972596159.<br>Tel-Fax: 080-22109565/41142575<br>e-mail: kapil.m@agsinfotech.com | --------- | -Thin Clients |

**T. PATHALINGAIAH**
Desk Officer-1
Department of Personnel & Administrative Reforms (e-Governance).

**Annexe-3**

**(Government Order No. DPAR 30 EGV 2008 dated 3rd October 2009.)**

| - II - Computer Peripherals and Network Components Valid up to 31.12.2011 | | | | |
|---|---|---|---|---|
| **Sl. No** | **Address of the Vendor** | **Contact Person / Phone No / Fax. No. e-mail address** | **Authorised Partners** | **Approved items** |
| 1 | CANON INDIA PVT LTD, # 135, 10th Floor, Brigade Road, Brigade Towers, Bengaluru-560025 | B.S. Lokesh<br>Ph: 080-40079400<br>Fax: 080-40079401<br>Cell: +91 9880520667<br>lokesh.bs@cannon.co.in | 1. Reflect Business Machines | -Laser Printers<br>-Inkjet Printers<br>-Scanners |

| Sl. No | Address of the Vendor | Contact Person / Phone No / Fax. No. e-mail address | Authorised Partners | Approved items |
|---|---|---|---|---|
| 2 | HEWLETT-PACKARD INDIA SALES PVT LTD, # 24, Salarpuria arena, Hosur Main Road, Adugodi, Bengaluru-560030. | Sanoj S.K<br>Ph: 080-25633555<br>Fax: 080-25633222<br>Cell: +91 9886027230<br>sanoj.sk@hp.com | 1.Future Businesstech India Pvt. Ltd.<br>2. Precision Infomatic Madras) Pvt.Ltd.,<br>3 Value Point Systems (P) Ltd,<br>4. HCL Infosystems Ltd.,<br>5. Wipro Infotech, | -Laser Printers<br>-Inkjet Printers<br>-Scanners |
| 3 | WeP Peripherals Ltd., # 40/1.A, Basappa Complex, Lavelle Road, Bengaluru-560001 | Prashant Gouda<br>Ph: 080-66112032 / 2016<br>Fax: 080-22270378<br>Cell: 9243857810<br>e-mail: prashant.gouda@wepindia.com | 1. HCL Infosystems Ltd.<br>2. Binary Systems<br>3. Virtual Technologies | -Dot Matrix Printers<br>-Line Matrix Printers<br>-Laser Printers |
| 4 | TVS Electronics Ltd., Ozone, 10, 3rd Main, Ashwini Layout, Ejapura, Bengaluru-560047 | R. Praveen Raj / Rohit Gupta<br>Ph: 080-41189100<br>Fax: 080-41189100<br>Cell: +91 9000486664<br>r.praveenraj@tvs-e.in | 1. HCL Infosystems Ltd<br>2. DELI India Pvt Limited<br>3. Wipro Infotech Ltd<br>4. Acer India Pvt Ltd<br>5 CMS Info Systems Pvt Ltd., | -Dot Matrix Printers |
| 5 | Lipi Data Systems Limited, The Presidency, New No. 82, Ground Floor, Next to Bishop Cotton Boys High School, St. Marks Road, Bengaluru-560001. | G.V. Nageswar<br>Ph: 080-22272954 / 2955<br>Fax: 080-22277444<br>Cell: 988036675<br>gnageswar@lipidata.com | 1. Wipro Infotech<br>2. HCL InfoSystems Limited | -Dot Matrix Printers<br>-Line Matrix Printers |

**T. PATHALINGAIAH**
Desk Officer-1
Department of Personnel & Administrative Reforms (e-Governance).

**Annexe-4**

**(Government Order No. DPAR 30 EGV 2008 dated 3rd October 2009.)**

**Category - III - Computer Peripherals (Others) : Valid upto 31.12.2011**

| Sl. No | Vendors name & Address | Phone No / Fax. No. | Contact Person / e-mail address | Approved Items |
|---|---|---|---|---|
| 1 | Radiant Info Systems Limited, # 2227/1, Division No. 52A, 9th Main, Banashankiari 2nd Stage, Bengaluru-560070. | Ph: 080-26767702<br>26763316<br>Fax: 080-26764875<br>Cell: 9448116367 | J.K. Sathesh Kumar<br>sjetti@radianatinfo.com | - Biometrics (Sagem Defense Securite make),<br>- Fingerprint & Smart Card Devices (Kyros Soft Tech Limited make) |

| Sl. No | Vendors name & Address | Phone No / Fax. No. | Contact Person / e-mail address | Approved Items |
|---|---|---|---|---|
| 2 | HCL Infosystems Ltd.,<br># 128/1, Vidya Deep,<br>Ulsoor Road,<br>Bengaluru-560042. | Ph: 080 - 25586131<br>25586844<br>Fax: 080- 25586944 | Sridhar Krishna<br>asdhark@hcl.in<br>9844066441<br>Syriach.N.<br>msyriach@hcl<br>9845021788<br>Santosh Kumar JJ<br>santosh.ii@hcl.in<br>988622119 | Projectors<br>(Infocus & Hitachi make) |
| 3 | ACER INDIA (P) Ltd.<br># 873, 2nd Floor,<br>80 Feet Road,<br>Indiranagar 3rdStage,<br>Bengaluru-560038 | Ph: 080-40708611<br>Ph: 080-40708600<br>Fax- 080-25219536<br>Cell: 9886104840 | Shrihari R<br>shrihari_r@acer.co.in | Projectors<br>(Acer make) |

**Note for Departments**:

**If for any particular item, only one vendor has been empanelled, then the department concerned has to procure the same by inviting tenders/quotations as per the provisions of the Karnataka Transparency in Public Procurements Act 1999 and the rules made thereunder.**

**T. PATHALINGAIAH**
Desk Officer-1
Department of Personnel & Administrative Reforms (e-Governance).

**Annexe-5**

**(Government Order No. DPAR 30 EGV 2008 dated 3rd October 2009.)**

| Category – IV – Computer Networking: | | | Valid upto 31.12.2011 |
|---|---|---|---|
| **Sl. No** | **Name & Address of vendors** | **Phone No / Fax No.** | **Contact Person / e-mail address** |
| | **A : Major ( More than 50 nodes)** | | |
| 1 | HCL Infosystems Ltd,<br>“Subharam Complex”,<br># 144, 3rd Floor,<br>M.G.Road,<br>Bengaluru –560 001 | Ph: 080-25325958<br>Fax: 080-25584061<br>Cell: 9886221189 | Santosh Kumar JJ/ M.N. Arun Kumar/V.Anand<br>santosh.jj@hcl.in /<br>m.arunkumar@hcl.in /<br>v.anand@hcl.in |
| 2 | CMC Limited,<br># 11/2, KHR House,<br>Palace Road,<br>Bengaluru-560 052. | Ph.080- 66940500<br>Fx. 080- 22353322<br>Cell: 9739995005 | A.C. Ashok Kumar<br>bd.blr@cmcltd.com |
| 3 | CMS Info Systems Pvt Ltd,<br># 9/2, 3rdFloor,<br>Dhondusa Complex,<br>Richmond Circle,<br>Residency Road,<br>Bengaluru-560025 | Ph. 080- 30578806<br>Fx. 080- 30578866<br>Cell: 09448507221 | Wilfred Veigas<br>Wilfred_veigas@cms.com |

| Sl. No | Name & Address of vendors | Phone No / Fax No. | Contact Person / e-mail address |
|---|---|---|---|
| | **B: Minor (Less than 50 nodes)** | | |
| 1 | HCL Infosystems Ltd, "Subharam Complex", # 144, 3rd Floor, M.G.Road, Bengaluru –560 001 | Ph: 080-25325958<br>Fax: 080-25584061<br>Cell: 9886221189 | Santosh Kumar JJ/ M.N. Arun Kumar/V.Anand<br>santosh.jj@hcl.in / m.arunkumar@hcl.in / v.anand@hcl.in |
| 2 | CMC Limited, # 11/2, KHR House, Palace Road, Bengaluru-560 052. | Ph.080- 66940500<br>Fx. 080- 22353322<br>Cell: 9739995005 | A.C. Ashok Kumar<br>bd.blr@cmcltd.com |

**Note:**

1. The empanelled vendor shall supply, install and integrate the network components. The Network components should have been manufactured by the OEM who is also empanelled. The empanelled vendor should have direct authorisation from the OEM for selling/ supplying specific components of networks.).
2. Laying of cables. (Cable shall be of standard company).
3. The empanelled vendor cannot sub-contract the work except the labor component.
4. The vendor empanelled under minor category can take up projects upto 50 nodes only. The vendor empanelled under major category can take up projects exceeding 50 nodes.

**T. PATHALINGAIAH**
Desk Officer-1
Department of Personnel & Administrative Reforms (e-Governance).

**Annexe-6**

**(Government Order No. DPAR 30 EGV 2008 dated 3rd October 2009.)**

| **Category – VI – Software Vendors (Off the shelf products)** | | | **Valid upto 31.12.2011** | |
|---|---|---|---|---|
| **Sl. No** | **Name & address of the vendor** | **Phone No / Fax No.** | **Contact Person / e-mail address** | **Approved Products** |
| 1 | ACER INDIA (P) Ltd. # 873, 2nd Floor, 80 Feet Road, Indiranagar 3rdStage, Bengaluru-560038 | Ph: 080-40708611<br>Fax: 080-25219536<br>Cell: 9886104840 | Shrihari R<br>shrihari_r@acer.co.in | -Microsoft products<br>. |
| 2 | HCL Infosystems Ltd, "Subharam Complex", # 144, 3rd Floor, M.G.Road, Bengaluru –560 001 | Ph: 080-25325958<br>Fax: 080-25584061<br>Cell: 9886221189 | Santosh Kumar JJ/ M.N. Arun Kumar/V.Anand<br>santosh.jj@hcl.in / m.arunkumar@hcl.in / v.anand@hcl.in | -Microsoft products,<br>-Oracle products,<br>-Antivirus (Symantec, Trend & CA) Products. |
| 3 | CMC Limited, # 11/2, KHR House, Palace Road, Bengaluru-560 052. | Ph.080- 66940500<br>Fx. 080- 22353322<br>Cell: 9739995005 | A.C. Ashok Kumar<br>bd.blr@cmcltd.com | -Microsoft products,<br>-Antivirus (Symantec) Products, |

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದ ಕಾನೂನು ಅಧಿಕಾರಿಗಳಿಗೆ ವೇತನ ಪಾವತಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 75 ಸಸಿವಿ 2006, ದಿನಾಂಕ 23.1.2007.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 408 ಸಅಸೇ 2008, ದಿನಾಂಕ 6.9.2008.
3. ಸರ್ಕಾರದ ಆದೇಶ ಸಂಖ್ಯೆ: ಕಂಇ 26 ಭೂಸ್ವಾವ್ಯಾ 2008, ದಿನಾಂಕ 13.3.2008.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 26 ಭೂಸ್ವಾವ್ಯಾ 2008, ದಿನಾಂಕ 20.3.2008.
5. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 26 ಭೂಸ್ವಾವ್ಯಾ 2008, ದಿನಾಂಕ 5.8.2008.
6. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 26 ಭೂಸ್ವಾವ್ಯಾ 2008, ದಿನಾಂಕ 2.12.2008.
7. ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಕಂಇ 26 ಭೂಸ್ವಾವ್ಯಾ 2008, ದಿನಾಂಕ 12.11.2008 ಮತ್ತು ದಿನಾಂಕ 19.12.2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1) & (2)ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ 5 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ಸೃಜಿಸಲಾಗಿದೆ. ಮೇಲೆ ಕ್ರಮಸಂಖ್ಯೆ (3) ರಿಂದ (6)ರ ವರೆಗಿನ ಸರ್ಕಾರಿ ಆದೇಶ ಹಾಗೂ ಅಧಿಸೂಚನೆಗಳಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ಹೊಸದಾಗಿ ಸೃಜಿಸಲಾಗಿರುವ ಸಿವಿಲ್ ಜಡ್ಜ್ (ಸೀನಿಯರ್ ಡಿವಿಜನ್) ದರ್ಜೆಯ ಕಾನೂನು ಅಧಿಕಾರಿಗಳ ಹುದ್ದೆಗೆ ನಿವೃತ್ತ ಜಿಲ್ಲಾ ನ್ಯಾಯಾಧೀಶರುಗಳನ್ನು ಮಾಸಿಕ ರೂ. 25,000/-ಗಳ ಸಂಚಿತ ವೇತನದಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲಾಗಿದೆ ಹಾಗೂ ಅವರುಗಳ ವೇತನವನ್ನು ಬೆಂಗಳೂರು ಪ್ರಾದೇಶಿಕ ಆಯುಕ್ತರ ಕಛೇರಿಗೆ ಸಂಬಂಧಪಟ್ಟ ಆಯವ್ಯಯ ಲೆಕ್ಕಶೀರ್ಷಿಕೆ 2053-00-101-05-002-(ಯೋಜನೇತರ) ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು ಎಂದು ಆದೇಶಿಸಲಾಗಿದೆ.

ಮೇಲಿನ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ಕಂದಾಯ ಇಲಾಖೆಯು ತನ್ನ ಕಾನೂನು ಕೋಶದಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಹೆಚ್ಚುವರಿ ಕಾನೂನು ಅಧಿಕಾರಿಗಳ ಹುದ್ದೆಗಳು ಸಚಿವಾಲಯದ ಇಲಾಖೆಯ ಹುದ್ದೆಗಳಾಗಿರುವುದರಿಂದ ಮತ್ತು ಈ ಹುದ್ದೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಸೃಜಿಸಿರುವುದರಿಂದ ಹೆಚ್ಚುವರಿ ಕಾನೂನು ಅಧಿಕಾರಿಗಳ ಹುದ್ದೆಗಳಿಗೆ ನೀಡಲಾಗಿರುವ ಸಂಚಿತ ವೇತನವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಲೆಕ್ಕಶೀರ್ಷಿಕೆಯಿಂದ ಭರಿಸಬೇಕಾಗಿರುವುದರಿಂದ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವ ನಿವೃತ್ತ ನ್ಯಾಯಾಧೀಶರುಗಳಿಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಿಂದಲೇ ಸಂಚಿತ ವೇತನವನ್ನು ಪಾವತಿಸುವಂತೆ ಕೋರಿದೆ. ಇದನ್ನು ಪರಿಶೀಲಿಸಿ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 594 ಸಅಸೇ 2008, ಬೆಂಗಳೂರು, ದಿನಾಂಕ: 9ನೇ ಏಪ್ರಿಲ್ 2009**

ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ಸೃಜಿಸಲಾಗಿರುವ ಸಿವಿಲ್ ಜಡ್ಜ್ (ಸೀನಿಯರ್ ಡಿವಿಜನ್) ದರ್ಜೆಯ ಕಾನೂನು ಅಧಿಕಾರಿಗಳ ಹುದ್ದೆಗಳಿಗೆ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಕಾನೂನು ಅಧಿಕಾರಿಗಳಾಗಿ ನೇಮಕಗೊಂಡಿರುವ ನಿವೃತ್ತ ಜಿಲ್ಲಾ ನ್ಯಾಯಾಧೀಶರುಗಳಿಗೆ ಮಾಸಿಕ ರೂ. 25,000-00ಗಳ ಸಂಚಿತ ವೇತನವನ್ನು ಹಾಗೂ ಅವರ ಸಿಬ್ಬಂದಿಯ ವೇತನವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಗೆ ಒದಗಿಸಲಾದ ಆಯವ್ಯಯದಲ್ಲಿಯೇ ಭರಿಸಿ ಪಾವತಿಸುವಂತೆ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 947 ವೆಚ್ಚ: 5/2008, ದಿನಾಂಕ 2.9.2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1145

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ಸೇವೆಗಳು 3)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** 2008-09ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ 20.2.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ-3/2008-09/1197.
2. ದಿನಾಂಕ 24.2.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ-5/2008-09/1258.
3. ದಿನಾಂಕ 21.2.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ-3/2008-09/1218.

4. ಸರ್ಕಾರದ ಆದೇಶ ಸಂಖ್ಯೆ: ಸನೀಇ 40 ಮಸಾವಿ 2009(1), ದಿನಾಂಕ 28.2.2009.
5. ಸರ್ಕಾರದ ಆದೇಶ ಸಂಖ್ಯೆ: ಸನೀಇ 40 ಮಸಾವಿ 2009(2), ದಿನಾಂಕ 28.2.2009.

**ಪ್ರಸ್ತಾವನೆ :**

2008-09ನೇ ಸಾಲಿನ ಆಯವ್ಯಯದ ವಿವಿಧ ಲೆಕ್ಕ ಶೀರ್ಷಿಕೆಗಳಡಿ 5 ಕಾಮಗಾರಿಗಳ (ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ) ಅಂದಾಜು ಪಟ್ಟಿಗಳಿಗೆ (ಅಂದಾಜು ಮೊತ್ತ 420.00 ಲಕ್ಷ ರೂ.ಗಳು) ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ 5 ಕಾಮಗಾರಿಗಳ ಪೈಕಿ 3 ಕಾಮಗಾರಿಗಳಿಗೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನ ವಾಸ್ತವಿಕ ಅಂದಾಜು ಮೊತ್ತದ ಶೇ. 30ಕ್ಕಿಂತ ಕಡಿಮೆ ಇರುವುದರಿಂದ ಉಲ್ಲೇಖ (4) ಮತ್ತು (5)ರ ಆದೇಶಗಳಲ್ಲಿ ಅನುದಾನದ ಮರುಹೊಂದಾಣಿಕೆ ಮಾಡಿದೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2008-09ನೇ ಸಾಲಿಗೆ ಮುಂದುವರೆಸಿರುವ 2007-08ನೇ ಸಾಲಿನ ಸಣ್ಣ ನೀರಾವರಿ ಬೆಳಗಾವಿ ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ. ಈ ಕಾಮಗಾರಿಗಳು ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಶಕ್ಯವಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕ ಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಟಿಯಾಗಲಿರುವ ಹೊಸ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ಕಾಮಗಾರಿವಾರು ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009 ಭಾಗ-1(1), ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ವ್ಯಾಪ್ತಿಗೆ ಬರುವ ಅಡಕಗಳಿಸಿರುವ ಅನುಬಂಧದಲ್ಲಿ ತಿಳಿಸಿರುವ ಒಟ್ಟು ರೂ. 420.00 ಲಕ್ಷ (ನಾಲ್ಕು ನೂರ ಇಪ್ಪತ್ತು ಲಕ್ಷ ರೂ.) ಮೊತ್ತದ 5 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4) ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯು ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.
5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
7) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
8) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
10) ನೇರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16.5.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಅನುಬಂಧ

## ಸರ್ಕಾರದ ಆದೇಶ ಸಂಖ್ಯೆ ಸನೀಇ 15 ಮಸಾವಿ 2009 ಭಾಗ–1(1) ದಿನಾಂಕ 28.2.2009

(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತ ವಾಗಿರುವ ಅಂದಾಜು ಮೊತ್ತ | ಅನುಬಂಧ–ಇ ವಿವರಗಳು | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪನಗೊಂಡ/ ಸ್ಥಿರೀಕರಣಗೊಂಡ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| **ಗಿರಿಜನ ಉಪ ಯೋಜನೆ ಲೆಕ್ಕಶೀರ್ಷಿಕೆ 4702–00–101–5–01–423 ಅಣೆಕಟ್ಟು ಮತ್ತು ಪಿಕಪ್‌ಗಳ ನಿರ್ಮಾಣ** | | | | | | | | | |
| 1 | ಗದಗ ಜಿಲ್ಲೆ ಹಾಗೂ ತಾಲ್ಲೂಕಿನ ಕುರ್ತಕೋಟಿ ಗ್ರಾಮದ ಹತ್ತಿರ ಹಳ್ಳಕ್ಕೆ ಬಾಂದಾರ ನಿರ್ಮಾಣ | 50.00 | 50.00 | 15.00 | ಕೃಷ್ಣಾ | ಹೊಸ ಕಾಮಗಾರಿ | 40 | 0 | ಫ್ರೀ ಓವರ್ ಫಾಲ್ ಮಾದರಿಯ ಹೊಸ ಬ್ಯಾರೇಜ್ ನಿರ್ಮಾಣ<br>ಬ್ಯಾರೇಜಿನ ಉದ್ದ – 35.00 ಮೀ.<br>ಎತ್ತರ – 1.70 ಮೀ.<br>ಶೇಖರಣಾ ಸಾಮರ್ಥ್ಯ – 0.352 Mcum ಮತ್ತು ಶೇ. 10ರ ಬಡ್ಡಿ ದರದಲ್ಲಿ ಲಾಭ ವೆಚ್ಚದ ಅನುಪಾತ 1.80 |
| 2 | ಗದಗ ಜಿಲ್ಲೆ ಶಿರಹಟ್ಟಿ ತಾಲ್ಲೂಕಿನ ಗೋಜನೂರ ಹತ್ತಿರ ಹಳ್ಳಕ್ಕೆ ಬಾಂದಾರ ನಿರ್ಮಾಣ | 50.00 | 65.00 | 19.50 | ಕೃಷ್ಣಾ | ಹೊಸ ಕಾಮಗಾರಿ | 40 | 0 | ಹೊಸ ಬ್ಯಾರೇಜ್/ಕಿಂಡಿ ಅಣೆಕಟ್ಟು ನಿರ್ಮಾಣ<br>ಬ್ಯಾರೇಜಿನ ಉದ್ದ – 28.00ಮೀ.<br>ಎತ್ತರ – 2ಮೀ.<br>ಶೇಖರಣಾ ಸಾಮರ್ಥ್ಯ–0.592 Mcft |
| 3 | ಗದಗ ಜಿಲ್ಲೆ ಶಿರಹಟ್ಟಿ ತಾಲ್ಲೂಕಿನ ಕುಂಚಗೇರಿ ಗ್ರಾಮದ ಹತ್ತಿರ ಬಾಂದಾರ ನಿರ್ಮಾಣ | 100.00 | 50.00 | 15.00 | ಕೃಷ್ಣಾ | ಹೊಸ ಕಾಮಗಾರಿ | 41 | 0 | ಹೊಸ ಬ್ಯಾರೇಜ್ ನಿರ್ಮಾಣ<br>ಬ್ಯಾರೇಜಿನ ಉದ್ದ – 24.00 ಮೀ.<br>ಎತ್ತರ – 2.00 ಮೀ.<br>ಶೇಖರಣಾ ಸಾಮರ್ಥ್ಯ – 0.2425 Mcum<br>ಮುಖ್ಯ ಪಿಯರ್‌ಗಳ ಸಂಖ್ಯೆ – 4 ಹಾಗೂ ನೆಪಮಾತ್ರ ಪಿಯರ್‌ಗಳ ಸಂಖ್ಯೆ – 5<br>ಶೇ. 10ರ ಬಡ್ಡಿದರದಲ್ಲಿ ಲಾಭ ವೆಚ್ಚದ ಅನುಪಾತ 1.73 ಆಗಿರುತ್ತದೆ. |
| | | | | | | | | | |

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತ ವಾಗಿರುವ ಅಂದಾಜು ಮೊತ್ತ | ಅನುಬಂಧ–ಇ ವಿವರಗಳು | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪಿಸಲಾಗುವ/ ಸ್ಥಿರೀಕರಿಸುವ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| | ಆದೇಶ ಸಂಖ್ಯೆ ಸನೀಇ 40 ಮಸಾವಿ 2009 (2) ದಿನಾಂಕ 28.2.2009ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ | | | 15.00 | | | | | |
| | **ಒಟ್ಟು** | **100.00** | **50.00** | **30.00** | | | | | |
| 4 | ಗದಗ ಜಿಲ್ಲೆ ಶಿರಹಟ್ಟಿ ತಾಲ್ಲೂಕಿನ ಬಾವನೂರ ಹತ್ತಿರ ಬಾಂದಾರ ನಿರ್ಮಾಣ | 70.00 | 65.00 | 19.50 | ಕೃಷ್ಣಾ | ಹೊಸ ಕಾಮಗಾರಿ | 60 | 0 | ಫ್ರೀ ಓವರ್ ಫಾಲ್ ಮಾದರಿಯ ಹೊಸ ಬ್ಯಾರೇಜ್ ನಿರ್ಮಾಣ<br>ಬ್ಯಾರೇಜಿನ ಉದ್ದ–32.31 ಮೀ.<br>ಎತ್ತರ–3.00 ಮೀ.<br>ಶೇಖರಣಾ ಸಾಮರ್ಥ್ಯ–0.352 Mcum ಮತ್ತು ಶೇ. 10ರ ಬಡ್ಡಿ ದರದಲ್ಲಿ ಲಾಭ ವೆಚ್ಚದ ಅನುಪಾತ 2.12 ಆಗಿರುತ್ತದೆ. |
| | | | | | | | | | |
| | ಆದೇಶ ಸಂಖ್ಯೆ ಸನೀಇ 40 ಮಸಾವಿ 2009(1) ದಿನಾಂಕ 28.2.2009ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ | | | 1.50 | | | | | |
| | **ಒಟ್ಟು** | **70.00** | **65.00** | **21.00** | | | | | |

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತ ವಾಗಿರುವ ಅಂದಾಜು ಮೊತ್ತ | ಅನುಬಂಧ-ಇ ವಿವರಗಳು | | ನದಿ ಕಣಿವೆ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪನೆಗೊಂಡ/ ಸ್ಥಿರೀಕರಿಸುವ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| | **ಗಿರಿಜನ ಉಪ ಯೋಜನೆ ಲೆಕ್ಕ ಶೀರ್ಷಿಕೆ 4702-00-101-5-01-423 ಒಟ್ಟು** | **270.00** | **230.00** | **85.50** | | | | | |
| | **ಲೆಕ್ಕಶೀರ್ಷಿಕೆ 4711-01-103-1-00-140 ಪ್ರವಾಹ ನಿಯಂತ್ರಣ ಕಾಮಗಾರಿಗಳು** | | | | | | | | |
| 5. | ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕಿನ ಸಾರವಾಡ ಗ್ರಾಮದ ಹತ್ತಿರ ದೋಣಿ ನದಿಯ ಪ್ರವಾಹ ಸಂರಕ್ಷಣಾ ಕಾಮಗಾರಿ | 150.00 | 50.00 | 15.00 | ಕೃಷ್ಣಾ | ಹೊಸ ಕಾಮಗಾರಿ | | | ದೋಣಿ ನದಿಯ ಪ್ರವಾಹದಿಂದ ಹಾನಿಯಾಗಿರುವ ಹಳೆ ಪೈಪ್ ಕಲ್ವರ್ಟ್ ಬ್ರಿಡ್ಜ್ ಬದಲಾಗಿ ಹೊಸ ಡೆಕ್ ಸ್ಲಾಬ್ ಬ್ರಿಡ್ಜ್ ನಿರ್ಮಾಣ |
| | ಆದೇಶ ಸಂಖ್ಯೆ ಸನೀಇ 40 ಮಸಾವಿ 2009(1) ದಿನಾಂಕ 28.2.2009ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ | | | 30.00 | | | | | |
| | **ಲೆಕ್ಕಶೀರ್ಷಿಕೆ 4711-01-103-1-00-140 ಒಟ್ಟು** | **150.00** | **50.00** | **45.00** | | | | | |
| | **ಒಟ್ಟು** | **420.00** | **280.00** | **130.50** | | | | | |

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 900

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಬಿ.ಎಫ್. ತಳವಾರ್, ನಿವೃತ್ತ ಕೆಎಎಸ್ ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ – ಅಂತಿಮ ಆದೇಶ.

**ಓದಲಾಗಿದೆ :**
1. ದಿನಾಂಕ 25.6.07ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 087, ಎಸ್ಇಎನ್ 02.
2. ದಿನಾಂಕ 24.4.08ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 023 ಕೆಇವಿ 07.
3. ಪ್ರಾದೇಶಿಕ ಆಯುಕ್ತರ, ಬೆಳಗಾವಿ ವಿಭಾಗ, ಬೆಳಗಾವಿ ಹಾಗೂ ವಿಚಾರಣಾಧಿಕಾರಿಗಳು, ಇವರ ವಿಚಾರಣಾ ವರದಿ ಸಂಖ್ಯೆ: ಪ್ರಾಅಬೆ/ಸಿಬ್ಬಂದಿ1/ಇವಿ/ವಿವ/01/07–08, ದಿನಾಂಕ 30.12.08.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಬಿ.ಎಫ್. ತಳವಾರ, ಕೆಎಎಸ್ (ಕಿರಿಯ ಶ್ರೇಣಿ) ನಿವೃತ್ತ ಅಧಿಕಾರಿ ಇವರು ಚನ್ನಗಿರಿ ತಾಲ್ಲೂಕು ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಚನ್ನಗಿರಿ ತಾಲ್ಲೂಕು, ಜಯಂತಿ ಗ್ರಾಮದ ಶ್ರೀ ರಾಜಪ್ಪ ಬಿನ್ ಹಾಲಪ್ಪ ಹಾಗೂ ಹಾಲಪ್ಪ ಬಿನ್ ರಾಮಪ್ಪ ಎಂಬುವವರಿಗೆ ಜಾತಿ ಪ್ರಮಾಣ ಪತ್ರ ನೀಡುವಾಗ ಅನುಸರಿಸಬೇಕಾದ ಕಾರ್ಯವಿಧಾನವನ್ನು ಪಾಲಿಸದೇ ಸದರಿಯವರು ಹಿಂದುಳಿದ ಉಪ್ಪಾರ ಜಾತಿಗೆ ಸೇರಿದವರಾಗಿದ್ದರೂ ಗ್ರಾಮ ಲೆಕ್ಕಿಗರು ನೀಡಿದ ವರದಿಯ ಆಧಾರದ ಮೇಲೆ ಪರಿಶಿಷ್ಟ ಪಂಗಡದ ನಾಯಕ ಜಾತಿ ಎಂದು ಪ್ರಮಾಣ ಪತ್ರ ನೀಡಿದ ಆರೋಪವನ್ನು ವಿಚಾರಣೆ ನಡೆಸಿ ವರದಿ ಸಲ್ಲಿಸಲು, ಪ್ರಾದೇಶಿಕ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಳಗಾಂ ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ತಹಶೀಲ್ದಾರ್, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ ಇವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಿದ ದಿನಾಂಕ 1.2.08ರ ವಿಚಾರಣಾ ವರದಿಯನ್ನು ತಿರಸ್ಕರಿಸುತ್ತಾ ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ತಹಶೀಲ್ದಾರ್, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ ಇವರು ಪ್ರಕರಣದ ಸಾಕ್ಷಿದಾರರಾಗಿದ್ದ ಕಾರಣ, ಇವರ ಬದಲಿಗೆ ಉಪ ವಿಭಾಗಾಧಿಕಾರಿಗಳು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಜಿಲ್ಲೆ ಇವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಂತೆ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿಯಲ್ಲಿ, ಶ್ರೀ ಬಿ.ಎಫ್. ತಳವಾರ, ಕೆಎಎಸ್ (ಕಿರಿಯ ಶ್ರೇಣಿ) ನಿವೃತ್ತ ಅಧಿಕಾರಿ ಇವರ ವಿರುದ್ಧದ ಆರೋಪವು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ ನಂತರ ವಿಚಾರಣಾ ವರದಿಯನ್ನು ಅಂಗೀಕರಿಸಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 023 ಕೆಇವಿ 07, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಶ್ರೀ ಬಿ.ಎಫ್. ತಳವಾರ, ಕೆಎಎಸ್ (ಕಿರಿಯ ಶ್ರೇಣಿ) ನಿವೃತ್ತ ಅಧಿಕಾರಿ, ಹಿಂದಿನ ತಹಶೀಲ್ದಾರ್, ಚನ್ನಗಿರಿ ತಾಲ್ಲೂಕು, ಚನ್ನಗಿರಿ ಇವರನ್ನು ಪ್ರಸ್ತಾವನೆಯಲ್ಲಿ ವಿವರಿಸಿದ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1144

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ಸೇವೆಗಳು–2)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** 2008–09ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ 22.1.2009ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರ ಸಂಖ್ಯೆ: ಮುಸದ/ತಾಂ–5/ಸ.ಇಂ.–11/2008–09, ಆಯವ್ಯಯ/ಆಆ/ 2009/300.
2. ದಿನಾಂಕ 7.2.2009ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಸದ/ತಾಂ–5/ಸ.ಇಂ.–11/2009/ಆ.ಆ/541.
3. ಸರ್ಕಾರದ ಆದೇಶ ಸಂಖ್ಯೆ: ಸನೀಇ 09 ಆವಿಸಂ 2009, ದಿನಾಂಕ 26.2.2009.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರು 2008–09ನೇ ಸಾಲಿನ ಆಯವ್ಯಯದ "ಅಪೆಂಡಿಕ್ಸ್–ಇ"ನ ಲೆಕ್ಕಶೀರ್ಷಿಕೆ 4702–00–101–5–01–139–ಅಣೆಕಟ್ಟು ಮತ್ತು ಪಿಕಪ್‌ಗಳ

ನಿರ್ಮಾಣ ಮತ್ತು ಲೆಕ್ಕಶೀರ್ಷಿಕೆ 4702–00–101–1–07–139–ಕೆರೆಗಳ ಆಧುನೀಕರಣ (ಪ್ರಧಾನ ಕಾಮಗಾರಿಗಳು) ಅಡಿ 6 ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಕಾಮಗಾರಿ ಕೈಗೊಳ್ಳಲು ಅಂದಾಜಿನ ಶೇ. 30ರಷ್ಟು ಅನುದಾನದೊಂದಿಗೆ ಸೇರಿರುವ 1 ಹಾಗೂ ಅನುದಾನ ಕೊರತೆ ಇರುವ 5 ಕಾಮಗಾರಿಗಳಿದ್ದು, ಉಲ್ಲೇಖ (3)ರ ಆದೇಶದಲ್ಲಿ ಅನುದಾನದ ಮರುಹೊಂದಾಣಿಕೆ ಮಾಡಲಾಗಿದೆ. (ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ). ಈ 6 ಕಾಮಗಾರಿಗಳ ಅಂದಾಜು ಮೊತ್ತ 482.00 ಲಕ್ಷ ರೂ.ಗಳು ಆಗುತ್ತದೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2008–09ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ಸಣ್ಣ ನೀರಾವರಿ ಮೈಸೂರು ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಟಿಯಾಗಲಿರುವ ಹೊಸ ಅಚ್ಚುಕಟ್ಟು/ಸ್ಥಿರೀಕರಿಸಲಾಗುತ್ತಿರುವ/ಪುನರ್ ಸ್ಥಾಪಿಸಲಾಗುತ್ತಿರುವ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ಕಾಮಗಾರಿವಾರು ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಮಸಾವಿ 2009 (2), ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ವ್ಯಾಪ್ತಿಗೆ ಬರುವ ಅನುಬಂಧದಲ್ಲಿ ತಿಳಿಸಿರುವ ಒಟ್ಟು 482.00 ಲಕ್ಷ ರೂ.ಗಳ (ನಾಲ್ಕು ನೂರ ಎಂಬತ್ತೆರಡು ಲಕ್ಷ ರೂ.ಗಳು ಮಾತ್ರ) ಅಂದಾಜು ಮೊತ್ತದ 6 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4. ಕಾಮಗಾರಿಯ ಅಂದಾಜು ಪಟ್ಟಿಗಳನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯು ಸಭೆಯಲ್ಲಿ ಮಂಡಿಸಿ ತೀರುವಳಿಯನ್ನು ಪಡೆಯುವುದು.
5. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6. ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
7. ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
8. ಇ.ಐ.ಆರ್.ಎಲ್./ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
10. ನೇರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16.5.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಅನುಬಂಧ

### ಸರ್ಕಾರದ ಆದೇಶ ಸಂಖ್ಯೆ ಸನೀಇ 14 ಮಸಾವಿ 2009, ದಿನಾಂಕ 28.2.2009 (2)

(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತವಾದ ಅಂದಾಜು ಮೊತ್ತ | ಅನುಬಂಧ-ಇ ವಿವರಗಳು | | ನದಿ ವ್ಯೂಹ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಮರು ಸ್ಥಾಪನೆಯಾದ/ ಸ್ಥಿರೀಕರಿಸಿದ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| **ಲೆಕ್ಕ ಶೀರ್ಷಿಕೆ 4702-00-101-5-01-139 ಅಣೆಕಟ್ಟು ಮತ್ತು ಪಿಕಪ್ ನಿರ್ಮಾಣ** | | | | | | | | | |
| 1 | ದಕ್ಷಿಣ ಕನ್ನಡ ಜಿಲ್ಲೆ ಬಂಟ್ವಾಳ ತಾಲ್ಲೂಕು ವಿಟ್ಲಾ ಗ್ರಾಮದ ವನಭೋಜನಾ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ | 43.00 | 40.00 | 12.00 | ಪಶ್ಚಿಮ ವಾಹಿನಿ | ಹೊಸ ಕಾಮಗಾರಿ | 42.05 | | 36.30 ಮೀ. ಉದ್ದದ 2.50 ಮೀ. ಎತ್ತರದ 16 ಕಿಂಡಿಗಳುಳ್ಳ ಕಿಂಡಿ ಅಣೆಕಟ್ಟು ನಿರ್ಮಾಣ. ಅಣೆಕಟ್ಟೆಯ ಸಂಗ್ರಹಣಾ ಸಾಮರ್ಥ್ಯ 3.848 ದ.ಲ.ಘ. ಅಡಿ |
| | ಆದೇಶ ಸಂಖ್ಯೆ ಸನೀಇ 09 ಅವಿಸಂ 2009 ದಿನಾಂಕ 26.2.2009ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ | | | 0.90 | | | | | |
| 2 | ಉಡುಪಿ ಜಿಲ್ಲೆ ಉಡುಪಿ ತಾಲ್ಲೂಕು ಕಿಡಿಯೂರು ಅಂಬಲಪಾಡಿ ಗ್ರಾಮದ ಹತ್ತಿರ ಉಪ್ಪು ನೀರು ತಡೇ ಕಿಂಡಿ ಅಣೆಕಟ್ಟು ನಿರ್ಮಾಣ | 120.00 | 115.00 | 34.50 | ಪಶ್ಚಿಮ ವಾಹಿನಿ | ಹೊಸ ಕಾಮಗಾರಿ | 85.00 | | 79.50 ಮೀ. ಉದ್ದದ 2.20 ಮೀ. ಎತ್ತರದ 31 ಕಿಂಡಿಗಳುಳ್ಳ ಉಪ್ಪು ನೀರು ತಡೇ ಕಿಂಡಿ ಅಣೆಕಟ್ಟು ನಿರ್ಮಾಣ. ಅಣೆಕಟ್ಟೆಯ ಸಂಗ್ರಹಣಾ ಸಾಮರ್ಥ್ಯ 3.848 ದ.ಲ.ಘ. ಅಡಿ |
| | ಆದೇಶ ಸಂಖ್ಯೆ ಸನೀಇ 09 ಅವಿಸಂ 2009 ದಿನಾಂಕ 26.2.2009ರಲ್ಲಿ | | | 1.50 | | | | | |

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತವಾದ ಅಂದಾಜು ಮೊತ್ತ | ಅನುಬಂಧ–ಇ ವಿವರಗಳು | | ನದಿ ಜಾಲ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪಿಸಲಾಗುವ/ ಸ್ಥಿರೀಕರಿಸುವ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| | ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ | | | | | | | | |
| 3 | ಉಡುಪಿ ಜಿಲ್ಲೆ ಉಡುಪಿ ತಾಲ್ಲೂಕು ಬೆಳ್ಳೆ ಗ್ರಾಮದ ಅಂಕುದ್ರು ಕಿಂಡಿ ಅಣೆಕಟ್ಟು ನಿರ್ಮಾಣ | 81.00 | 60.00 | 18.00 | ಪಶ್ಚಿಮ ವಾಹಿನಿ | ಹೊಸ ಕಾಮಗಾರಿ | 85.00 | | 42.00 ಮೀ. ಉದ್ದದ 3.50 ಮೀ. ಎತ್ತರದ 17 ಕಿಂಡಿಗಳುಳ್ಳ ಕಿಂಡಿ ಅಣೆಕಟ್ಟು ನಿರ್ಮಾಣ. ಅಣೆಕಟ್ಟೆಯ ಸಂಗ್ರಹಣಾ ಸಾಮರ್ಥ್ಯ 36.72 ದ.ಲ.ಘ. ಅಡಿ |
| | ಆದೇಶ ಸಂಖ್ಯೆ ಸನೀಇ 09 ಅವಿಸಂ 2009 ದಿನಾಂಕ 26.2.2009ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ | | | 6.30 | | | | | |
| 4 | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಹಳ್ಳಿಹೊಳೆ ಗ್ರಾಮದ ಬಾರೆಗುಂಡಿ ಎಂಬಲ್ಲಿ ಶಂಕರನಾರಾಯಣ ಎಡಿಯಾಳ ಮನೆ ಬಳಿ ಕಿಂಡಿ ಅಣೆಕಟ್ಟು ನಿರ್ಮಾಣ | 85.00 | 60.00 | 18.00 | ಪಶ್ಚಿಮ ವಾಹಿನಿ | ಹೊಸ ಕಾಮಗಾರಿ | 41.00 | | 52.00 ಮೀ. ಉದ್ದದ 3.00 ಮೀ. ಎತ್ತರದ 21 ಕಿಂಡಿಗಳುಳ್ಳ ಕಿಂಡಿ ಅಣೆಕಟ್ಟು ನಿರ್ಮಾಣ. ಅಣೆಕಟ್ಟೆಯ ಸಂಗ್ರಹಣಾ ಸಾಮರ್ಥ್ಯ 19.07 ದ.ಲ.ಘ. ಅಡಿ |
| | ಆದೇಶ ಸಂಖ್ಯೆ ಸನೀಇ 09 ಅವಿಸಂ 2009 ದಿನಾಂಕ 26.2.2009ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ | | | 7.50 | | | | | |

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತವಾಗಿರುವ ಅಂದಾಜು ಮೊತ್ತ | ಅನುಬಂಧ-ಇ ವಿವರಗಳು | | ನದಿ ಪಾತ್ರ | ಕಾಮಗಾರಿ ಸ್ವರೂಪ | ಹೊಸ ಅಣೆಕಟ್ಟು | ಪುನರ್ ನಿರ್ಮಾಣವಾಗುವ/ ಸ್ಥಿರೀಕರಿಸುವ ಅಣೆಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| 5 | ಉಡುಪಿ ಜಿಲ್ಲೆ ಉಡುಪಿ ತಾಲ್ಲೂಕು ಮದ್ದೂರು ಗ್ರಾಮದ ಹಂದಿಕಲ್ಲು ಎಂಬಲ್ಲಿ ಸೀತಾನದಿಗೆ ಅಡ್ಡಲಾಗಿ ಕಿಂಡಿ ಅಣೆಕಟ್ಟು ನಿರ್ಮಾಣ | 108.00 | 75.00 | 22.50 | ಪಶ್ಚಿಮ ವಾಹಿನಿ | ಹೊಸ ಕಾಮಗಾರಿ | 90.00 | | 72.00 ಮೀ. ಉದ್ದದ 3.70 ಮೀ. ಎತ್ತರದ 29 ಕಿಂಡಿಗಳುಳ್ಳ ಕಿಂಡಿ ಅಣೆಕಟ್ಟು ನಿರ್ಮಾಣ |
| | ಆದೇಶ ಸಂಖ್ಯೆ ಸನೀಇ 09 ಅವಿಸಂ 2009 ದಿನಾಂಕ 26.2.2009ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ | | | 9.90 | | | | | |
| **ಲೆಕ್ಕ ಶೀರ್ಷಿಕೆ 4702-00-101-1-07-139 ಕೆರೆಗಳ ಆಧುನೀಕರಣ** | | | | | | | | | |
| 6 | ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕು ಕಡೇಕಾರು ಮಲ್ಲಿಕಾರ್ಜುನ ದೇವಸ್ಥಾನದ ಕೆರೆ ಅಭಿವೃದ್ಧಿ | 45.00 | 100.00 | 30.00 | ಪಶ್ಚಿಮ ವಾಹಿನಿ | ಪುನರುಜ್ಜೀವನ ಕಾಮಗಾರಿ | 0.00 | 95.00 | ಕೆರೆಯ ಏರಿ, ಕೋಡಿ, ಹಾಗೂ ಕೋಡಿ ಕಾಲುವೆ ಅಭಿವೃದ್ಧಿ ಇತ್ಯಾದಿ |
| | ಆದೇಶ ಸಂಖ್ಯೆ ಸನೀಇ 09 ಅವಿಸಂ 2009 ದಿನಾಂಕ 26.2.2009ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ (ಉಳಿತಾಯವಾಗುವ ಅನುದಾನ) | | | 16.50 | | | | | |
| | **ಒಟ್ಟು** | **482.00** | **450.00** | **144.60** | | | | | |

ಪಿ.ಆರ್. 902

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಮೇಟಗಳ್ಳಿ ಗ್ರಾಮದ ಮೋಜಣಿ ಸಂಖ್ಯೆ: 84ರ ವಿಸ್ತೀರ್ಣ 01 ಎಕರೆ 06 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಾಣಿಜ್ಯ (ಹೋಟೆಲ್) ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ: ಮೈನಪ್ರಾ: ನಯೋ: ಸಭೆ: 66: 08–09, ದಿನಾಂಕ 1.12.2008.
2. ದಿ: 17.1.09ರಂದು ಕಡತ ಸಂಖ್ಯೆ ನಯೋ:ಉನಿ:ಭೂಉಬ:ಮೇಟಗಳ್ಳಿ:342:2008–09ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಮೇಟಗಳ್ಳಿ ಗ್ರಾಮದ ಮೋಜಣಿ ಸಂಖ್ಯೆ 84ರ ವಿಸ್ತೀರ್ಣ 01 ಎಕರೆ 06 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಾಣಿಜ್ಯ (ಹೋಟೆಲ್) ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ತು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 112 ಮೈಅಪ್ರಾ 2009, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಮೇಟಗಳ್ಳಿ ಗ್ರಾಮದ ಮೋಜಣಿ ಸಂಖ್ಯೆ 84ರ ವಿಸ್ತೀರ್ಣ 01 ಎಕರೆ 06 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಾಣಿಜ್ಯ (ಹೋಟೆಲ್) ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ಥಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ಧ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಾಣಿಜ್ಯ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.
5. ಪ್ರಸ್ತಾವಿತ ವಾಣಿಜ್ಯ ಕಟ್ಟಡದಲ್ಲಿ ವಾಹನ ನಿಲುಗಡೆಗೆ ಅಗತ್ಯ ಸೌಲಭ್ಯವನ್ನು ಕಲ್ಪಿಸಿಕೊಳ್ಳತಕ್ಕದ್ದು.
6. ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 647

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** 2008–09ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ 4.2.2009ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರ ಸಂಖ್ಯೆ ಮುಸದ/ತಾಂ–4/ಸ.ಇಂ.9/4702/ಸ.ಆ.ಅ./2008–09/498.
2. ದಿನಾಂಕ 27.1.2009ರ ಬೆಂಗಳೂರು ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರ ಸಂಖ್ಯೆ ಮುಸದ/ತಾಂ–3/ಸ.ಇಂ.–7/ಚಿಂತಾಮಣಿ/ಕೊನಕುಂಟ್ಲು ಚೆಕ್ ಡ್ಯಾಂ/4702/ ಸ.ಆ.ಅ./2008–09/350.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರು 2008–09ನೇ ಸಾಲಿನ ಆಯವ್ಯಯದ "ಅಪೆಂಡಿಕ್ಸ್–ಇ" ನ ಲೆಕ್ಕ ಶೀರ್ಷಿಕೆ 4702–00–101–5–01–139–ಅಣೆಕಟ್ಟು ಮತ್ತು ಪಿಕಪ್‌ಗಳ ನಿರ್ಮಾಣ ಮತ್ತು ಲೆಕ್ಕ ಶೀರ್ಷಿಕೆ 4702–00–101–1–07–139–ಕೆರೆಗಳ ಆಧುನೀಕರಣ (ಪ್ರಧಾನ ಕಾಮಗಾರಿಗಳು) ಅಡಿ 5 ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಕಾಮಗಾರಿ ಕೈಗೊಳ್ಳಲು ಅಂದಾಜಿನ ಶೇ. 30ರಷ್ಟು ಅನುದಾನದೊಂದಿಗೆ ಅವಕಾಶ ಮಾಡಲಾಗಿದೆ. (ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ). ಈ 5 ಕಾಮಗಾರಿಗಳ ಅಂದಾಜು ಮೊತ್ತ 323.00 ಲಕ್ಷ ರೂ.ಗಳು ಆಗುತ್ತದೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2008–09ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ಸಣ್ಣ ನೀರಾವರಿ ಬೆಂಗಳೂರು/ಮೈಸೂರು ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಟಿಯಾಗಲಿರುವ ಹೊಸ ಅಚ್ಚುಕಟ್ಟು/ಸ್ಥಿರೀಕರಿಸಲಾಗುತ್ತಿರುವ/ ಪುನರ್ ಸ್ಥಾಪಿಸಲಾಗುತ್ತಿರುವ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ಕಾಮಗಾರಿವಾರು ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಮಸಾವಿ 2009(1), ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ವ್ಯಾಪ್ತಿಗೆ ಬರುವ ಈ ಆದೇಶದ ಅನುಬಂಧದಲ್ಲಿ ತಿಳಿಸಿರುವ ಒಟ್ಟು 323.00 ಲಕ್ಷ ರೂ.ಗಳ (ಮುನ್ನೂರ ಇಪ್ಪತ್ತಮೂರು ಲಕ್ಷ ರೂ.ಗಳು ಮಾತ್ರ) ಅಂದಾಜು ಮೊತ್ತದ 5 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4. ಕಾಮಗಾರಿಯ ಅಂದಾಜು ಪಟ್ಟಿಗಳನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯು ಸಭೆಯಲ್ಲಿ ಮಂಡಿಸಿ ತೀರುವಳಿಯನ್ನು ಪಡೆಯುವುದು.
5. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6. ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
7. ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
8. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
10. ನೇರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16.5.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ ಸನೀಇ 14 ಮಸಾವಿ 2009, ದಿನಾಂಕ 28.2.2009 (1)**

(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತ ವಾಗಿರುವ ಅಂದಾಜು ಮೊತ್ತ | ಅನುಬಂಧ–ಇ ವಿವರಗಳು | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪಿಸಲಾಗುವ/ ಸ್ಥಿರೀಕರಿಸುವ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| **ಲೆಕ್ಕ ಶೀರ್ಷಿಕೆ 4702–00–101–5–01–139 ಅಣೆಕಟ್ಟು ಮತ್ತು ಪಿಕಪ್ ನಿರ್ಮಾಣ** | | | | | | | | | |
| 1 | ಚಿಕ್ಕಬಳ್ಳಾಪುರ ಜಿಲ್ಲೆ ಚಿಕ್ಕಬಳ್ಳಾಪುರ ತಾಲ್ಲೂಕು ಕೊಣಕುಂಟು ಬಳಿ ಚೆಕ್ ಡ್ಯಾಂ ನಿರ್ಮಾಣ | 35.00 | 35.00 | 10.50 | ಪಾಲಾರ್ | ಹೊಸ ಕಾಮಗಾರಿ | 0.00 | 0.00 | 30 ಮೀ. ಉದ್ದದ ಹಾಗೂ ಭೂ ಮಟ್ಟದಿಂದ 3.00 ಮೀ. ಎತ್ತರದ ಕಾಂಕ್ರಿಟ್ ಚೆಕ್ ಡ್ಯಾಂ ನಿರ್ಮಾಣ. ಹಾಗೂ ಚೆಕ್ ಡ್ಯಾಂ ಎರಡು ಬದಿ ಒಟ್ಟು 180 ಮೀ. ಉದ್ದದ ಮಣ್ಣಿನ ಏರಿ ನಿರ್ಮಾಣ |
| 2 | ದಕ್ಷಿಣ ಕನ್ನಡ ಜಿಲ್ಲೆ ಸೂಳ್ಯ ತಾಲ್ಲೂಕು ಸುಬ್ರಮಣ್ಯದಲ್ಲಿ ಕುಮಾರಧಾರ ನದಿಗೆ ಅಡ್ಡಲಾಗಿ ಕಿಂಡಿ ಅಣೆಕಟ್ಟು ನಿರ್ಮಾಣ | 150.00 | 150.00 | 45.00 | ಪಶ್ಚಿಮ ವಾಹಿನಿ | ಹೊಸ ಕಾಮಗಾರಿ | 120.00 | 0.00 | 65.00 ಮೀ. ಉದ್ದದ 3.00 ಮೀ ಎತ್ತರದ 24 ಕಿಂಡಿಗಳುಳ್ಳ ಕಿಂಡಿ ಅಣೆಕಟ್ಟು ನಿರ್ಮಾಣ. ಅಣೆಕಟ್ಟೆಯ ಸಂಗ್ರಹಣಾ ಸಾಮರ್ಥ್ಯ 4.19 ದ.ಲ.ಘ. ಅಡಿ. |
| **ಲೆಕ್ಕ ಶೀರ್ಷಿಕೆ 4702–00–101–1–07–139 ಕೆರೆಗಳ ಆಧುನೀಕರಣ** | | | | | | | | | |
| 3 | ಕೊಡಗು ಜಿಲ್ಲೆ ಮಡಿಕೇರಿ ತಾಲ್ಲೂಕು ಚೆರಂಗಳ ಗ್ರಾಮದ ನಾಗತೀರ್ಥ ಪಿಕಪ್ ಅಭಿವೃದ್ಧಿ | 38.00 | 38.00 | 11.40 | ಕಾವೇರಿ | ಪುನರುಜ್ಜೀವನ ಕಾಮಗಾರಿ | 0.00 | 48.60 | ಪಿಕಪ್‌ನ ಮುಖ್ಯ ಗೋಡೆಯ ಪುನರ್ ನಿರ್ಮಾಣ |
| 4 | ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕು ಗುಡಿಹಳ್ಳಿ ಕೆರೆ ಆಧುನೀಕರಣ | 50.00 | 50.00 | 15.00 | ಕೃಷ್ಣಾ | ಪುನರುಜ್ಜೀವನ ಕಾಮಗಾರಿ | 0.00 | 85.00 | ಕೆರೆಯ ಏರಿ ಅಭಿವೃದ್ಧಿ ಹಾಗೂ ಕೆರೆಯ ಕಾಲುವೆ ಅಭಿವೃದ್ಧಿ ಇತ್ಯಾದಿ |
| 5 | ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕು ಚಿಕ್ಕ ಕೆರೆ ಅಭಿವೃದ್ಧಿ | 50.00 | 50.00 | 15.00 | ಕೃಷ್ಣಾ | ಪುನರುಜ್ಜೀವನ ಕಾಮಗಾರಿ | 0.00 | 0.00 | ಕೆರೆಯ ಏರಿ ಅಭಿವೃದ್ಧಿ |
| | **ಒಟ್ಟು** | **323.00** | **323.00** | **96.90** | | | | | |

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 901 ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಶಿಕ್ಷಣ ಸಚಿವಾಲಯ**

**ವಿಷಯ :** 2008–09ನೇ ಸಾಲಿಗೆ ರಾಜ್ಯವಲಯದಿಂದ ಜಿಲ್ಲಾ ವಲಯಕ್ಕೆ ವರ್ಗಾವಣೆಯಾದ ಕಾರ್ಯಕ್ರಮಗಳಡಿ ಉಪಕಾರ್ಯಕ್ರಮಗಳವಾರು ಅನುದಾನವನ್ನು ಜಿಲ್ಲಾವಾರು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಯೋ(2) ಶುಲ್ಕ ಮರುಪಾವತಿ 3/2008–09, ದಿನಾಂಕ 28.7.2008.

**ಪ್ರಸ್ತಾವನೆ :**

(1) ಮೇಲೆ ಓದಲಾದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರದಲ್ಲಿ 2008–09ನೇ ಸಾಲಿನಲ್ಲಿ, ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳಿಗೆ ವರ್ಗಾಯಿಸಲಾದ

ಎ) ಸಾರ್ವಜನಿಕ ಪ್ರಾಥಮಿಕ ಶಿಕ್ಷಣದ ಉತ್ತೇಜನಕ್ಕಾಗಿ ಚಟುವಟಿಕೆಗಳು ಲೆಕ್ಕ ಶೀರ್ಷಿಕೆ 2202–01–800–1–35ರಡಿ ಈ ಕೆಳಕಂಡಂತೆ ಉಪಕಾರ್ಯಕ್ರಮಗಳಿಗೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

- ಅ) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ (6 ಮತ್ತು 7ನೇ ತರಗತಿ ಎಸ್.ಸಿ./ಎಸ್.ಟಿ. ಗಂಡು ಮಕ್ಕಳು ಮತ್ತು ಎಲ್ಲಾ ಹೆಣ್ಣುಮಕ್ಕಳು) ಸರ್ಕಾರೇತರ ಶುಲ್ಕ ಮರುಪಾವತಿ.
- ಆ) ಹೊಸ ಉಪನಿರ್ದೇಶಕರ ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ
- ಇ) ಹೊಸ ಬಿ.ಇ.ಓ. ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ.
- ಈ) ಅಕ್ಷರ ದಾಸೋಹ ಕಾರ್ಯಕ್ರಮ.

ಬಿ) ಧನಸಹಾಯ ಮತ್ತು ಫೀಜಿನ ಮರುಪಾವತಿ ಲೆಕ್ಕಶೀರ್ಷಿಕೆ 2202–02–800–1–05ರಡಿ ಈ ಕೆಳಕಂಡಂತೆ ಉಪಕಾರ್ಯಕ್ರಮಗಳಿಗೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

- ಅ) ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷಾ ಶುಲ್ಕ ಮರುಪಾವತಿ ಎಲ್ಲಾ ಹೆಣ್ಣು ಮಕ್ಕಳಿಗೆ
- ಆ) ಸರ್ಕಾರೇತರ ಶುಲ್ಕ ಎಲ್ಲಾ ಸಾಮಾನ್ಯ ಹೆಣ್ಣು ಮಕ್ಕಳಿಗೆ ಹಾಗೂ ಎಸ್.ಸಿ./ಎಸ್.ಟಿ. ಗಂಡು ಮಕ್ಕಳಿಗೆ (8,9 ಮತ್ತು 10ನೇ ತರಗತಿ)

ಮೇಲ್ಕಂಡ ಎರಡು ಯೋಜನಾ ಕಾರ್ಯಕ್ರಮಗಳಿಗೆ ವಿವಿಧ ಜಿಲ್ಲೆಗಳಿಗೆ ಹಂಚಿಕೆ ಮಾಡಿ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 192 ಯೋಯೋಕ 2008, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2008**

**(ಇಡಿ 146 ಸ್ಕೀಮರ (ಯುನಿಕ್) 2008, ದಿನಾಂಕ 4.9.2008)**

(3) 2008–09ನೇ ಸಾಲಿಗೆ ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳಿಗೆ ಲಿಂಕ್ ಡಾಕ್ಯುಮೆಂಟ್‌ನಲ್ಲಿ ಒದಗಿಸಲಾದ

ಎ) ಸಾರ್ವಜನಿಕ ಪ್ರಾಥಮಿಕ ಶಿಕ್ಷಣದ ಉತ್ತೇಜನಕ್ಕಾಗಿ ಚಟುವಟಿಕೆಗಳು ಲೆಕ್ಕ ಶೀರ್ಷಿಕೆ 2202–01–800–1–35 ರಡಿಯಲ್ಲಿನ ಅನುದಾನವನ್ನು ಈ ಕೆಳಕಂಡಂತೆ ಉಪ ಕಾರ್ಯಕ್ರಮಗಳಿಗೆ ಅನುಬಂಧ–1ರಲ್ಲಿ ತೋರಿಸಿರುವಂತೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

- ಅ) ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ [6 ಮತ್ತು 7ನೇ ತರಗತಿ ಎಸ್.ಸಿ./ಎಸ್.ಟಿ. ಗಂಡು ಮಕ್ಕಳು ಮತ್ತು ಎಲ್ಲಾ ಹೆಣ್ಣು ಮಕ್ಕಳು] ಸರ್ಕಾರೇತರ ಶುಲ್ಕ ಮರುಪಾವತಿ.
- ಆ) ಹೊಸ ಉಪನಿರ್ದೇಶಕರ ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ.
- ಇ) ಹೊಸ ಬಿ.ಇ.ಓ. ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ.
- ಈ) ಅಕ್ಷರ ದಾಸೋಹ ಕಾರ್ಯಕ್ರಮ

ಬಿ) ಧನಸಹಾಯ ಮತ್ತು ಫೀಜಿನ ಮರುಪಾವತಿ ಲೆಕ್ಕಶೀರ್ಷಿಕೆ 2202–02–800–1–05 ರಡಿಯಲ್ಲಿನ ಅನುದಾನವನ್ನು ಈ ಕೆಳಕಂಡಂತೆ ಉಪ ಕಾರ್ಯಕ್ರಮಗಳಿಗೆ ಅನುಬಂಧ–2ರಲ್ಲಿ ತೋರಿಸಿರುವಂತೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

- ಅ) ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷಾ ಶುಲ್ಕ ಮರುಪಾವತಿ ಎಲ್ಲಾ ಹೆಣ್ಣು ಮಕ್ಕಳಿಗೆ
- ಆ) ಸರ್ಕಾರೇತರ ಶುಲ್ಕ ಎಲ್ಲಾ ಸಾಮಾನ್ಯ ಹೆಣ್ಣು ಮಕ್ಕಳಿಗೆ ಹಾಗೂ ಎಸ್.ಸಿ./ಎಸ್.ಟಿ. ಗಂಡು ಮಕ್ಕಳಿಗೆ (8,9 ಮತ್ತು 10ನೇ ತರಗತಿ)

4) ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು.

5) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ ಶಿಇ 945 ಐಎಫ್ (ಬಿಎ) 2008, ದಿನಾಂಕ 19.8.2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

**ಸರ್ಕಾರಿ ಆದೇಶ ಸಂಖ್ಯೆ: ಇಡಿ 192 ಯೋಯೋಕ 2008, ಬೆಂಗಳೂರು, ದಿನಾಂಕ 4.9.2008**

**(ಇಡಿ 146 ಸ್ವೀಮರ (ಯುನಿಕ್) 2008, ದಿನಾಂಕ 4.9.2008)ಕ್ಕೆ ಅನುಬಂಧ–1**

**ಸಾರ್ವಜನಿಕ ಪ್ರಾಥಮಿಕ ಶಿಕ್ಷಣದ ಉತ್ತೇಜನಕ್ಕಾಗಿ ಚಟುವಟಿಕೆಗಳು – ಲೆಕ್ಕಶೀರ್ಷಿಕೆ 2202–01–800–1–35**

| ಕ್ರ. ಸಂ. | ಜಿಲ್ಲೆಯ ಹೆಸರು | ಲಿಂಕ್ ಡ್ಯಾಕುಮೆಂಟ್‌ನಲ್ಲಿ ಒದಗಿಸಲಾದ ಆಯವ್ಯಯ | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಸರ್ಕಾರೇತರ ಶುಲ್ಕ ಮರುಪಾವತಿ (6 ಮತ್ತು 7ನೇ ತರಗತಿ) ಎಸ್.ಸಿ./ ಎಸ್.ಟಿ. ಗಂಡು ಮಕ್ಕಳು ಮತ್ತು ಎಲ್ಲಾ ಹೆಣ್ಣು ಮಕ್ಕಳು | ಬಾಡಿಗೆ ವಾಹನ ಸೌಲಭ್ಯ (ಉಪ ನಿರ್ದೇಶಕರು ಗಳಿಗೆ) | ಬಾಡಿಗೆ ವಾಹನ ಸೌಲಭ್ಯ (ಬಿ.ಇ.ಓ.) ಗಳಿಗೆ | ಅಕ್ಷರ ದಾಸೋಹ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಬಾಗಲಕೋಟೆ | 1164.71 | 14.00 | 0.00 | 0.00 | 1150.71 |
| 2 | ಬೆಂಗಳೂರು ಉತ್ತರ | 1076.14 | 18.50 | 0.00 | 2.88 | 1054.76 |
| 3 | ಬೆಂಗಳೂರು ದಕ್ಷಿಣ | 0.00 | 0.00 | 0.00 | 0.00 | 0.00 |
| 4 | ಬೆಂಗಳೂರು ಗ್ರಾಮಾಂತರ | 583.82 | 4.97 | 0.00 | 0.00 | 578.85 |
| 5 | ರಾಮನಗರ | 704.10 | 4.77 | 0.00 | 0.00 | 699.33 |
| 6 | ಬೆಳಗಾಂ | 2152.09 | 26.00 | 1.80 | 2.88 | 2121.41 |
| 7 | ಬೆಳಗಾಂ ಉತ್ತರ–ಚಿಕ್ಕೋಡಿ | 0.00 | 0.00 | 0.00 | 0.00 | 0.00 |
| 8 | ಬಳ್ಳಾರಿ | 1571.40 | 11.89 | 0.00 | 1.44 | 1558.07 |
| 9 | ಬೀದರ್ | 1449.05 | 10.00 | 0.00 | 0.00 | 1439.05 |
| 10 | ಬಿಜಾಪುರ | 1604.21 | 15.00 | 0.00 | 1.44 | 1587.77 |
| 11 | ಚಾಮರಾಜನಗರ | 633.74 | 6.75 | 0.00 | 1.44 | 625.55 |
| 12 | ಚಿಕ್ಕಬಳ್ಳಾಪುರ | 562.44 | 7.00 | 0.00 | 0.00 | 555.44 |
| 13 | ಚಿಕ್ಕಮಗಳೂರು | 789.79 | 7.00 | 0.00 | 1.44 | 781.35 |
| 14 | ಚಿತ್ರದುರ್ಗ | 1205.84 | 11.00 | 0.00 | 0.00 | 1194.84 |
| 15 | ದಕ್ಷಿಣ ಕನ್ನಡ | 945.65 | 8.00 | 0.00 | 0.00 | 937.65 |
| 16 | ದಾವಣಗೆರೆ | 1117.24 | 14.00 | 0.00 | 0.00 | 1103.24 |
| 17 | ಧಾರವಾಡ | 1038.64 | 7.00 | 0.00 | 0.00 | 1031.64 |
| 18 | ಗದಗ | 728.57 | 5.00 | 0.00 | 0.00 | 723.57 |
| 19 | ಗುಲ್ಬರ್ಗಾ | 2623.49 | 34.65 | 1.80 | 1.44 | 2585.60 |
| 20 | ಯಾದಗಿರಿ | 0.00 | 0.00 | 0.00 | 0.00 | 0.00 |

| 1 | 2 | 3 | 4 | 5 | 6 | 7 |
|---|---|---|---|---|---|---|
| 21 | ಹಾಸನ | 1185.57 | 8.50 | 0.00 | 0.00 | 1177.07 |
| 22 | ಹಾವೇರಿ | 1114.64 | 11.73 | 0.00 | 0.00 | 1102.91 |
| 23 | ಕೊಡಗು | 304.37 | 3.25 | 0.00 | 0.00 | 301.12 |
| 24 | ಕೋಲಾರ | 1301.63 | 9.50 | 1.80 | 0.00 | 1290.33 |
| 25 | ಕೊಪ್ಪಳ | 1078.64 | 7.50 | 0.00 | 0.00 | 1071.14 |
| 26 | ತುಮಕೂರು | 1791.56 | 23.00 | 0.00 | 0.00 | 1768.56 |
| 27 | ಮಧುಗಿರಿ | 0.00 | 0.00 | 0.00 | 0.00 | 0.00 |
| 28 | ಮಂಡ್ಯ | 1013.31 | 9.00 | 0.00 | 1.44 | 1002.87 |
| 29 | ಮೈಸೂರು | 1466.72 | 15.90 | 0.00 | 1.44 | 1449.38 |
| 30 | ರಾಯಚೂರು | 1378.74 | 10.00 | 0.00 | 0.00 | 1368.74 |
| 31. | ಶಿವಮೊಗ್ಗ | 1114.64 | 8.00 | 0.00 | 0.00 | 1106.64 |
| 32. | ಉಡುಪಿ | 519.83 | 4.09 | 0.00 | 1.44 | 514.30 |
| 33. | ಉತ್ತರ ಕನ್ನಡ | 1205.84 | 8.50 | 0.00 | 0.00 | 1197.34 |
| | **ಒಟ್ಟು** | **33426.41** | **324.50** | **5.40** | **17.28** | **33079.23** |

**ಸರ್ಕಾರಿ ಆದೇಶ ಸಂಖ್ಯೆ: ಇಡಿ 192 ಯೋಯೋಕ 2008, ಬೆಂಗಳೂರು, ದಿನಾಂಕ 4.9.2008**

**(ಇಡಿ 146 ಸ್ವೀಮರ (ಯುನಿಕ್) 2008, ದಿನಾಂಕ 4.9.2008)ಕ್ಕೆ ಅನುಬಂಧ–2**

**ಧನ ಸಹಾಯ ಮತ್ತು ಶುಲ್ಕ ಮರುಪಾವತಿ ಲೆಕ್ಕಶೀರ್ಷಿಕೆ 2202–02–800–1–05**

| ಕ್ರ. ಸಂ. | ಜಿಲ್ಲೆಯ ಹೆಸರು | ಲಿಂಕ್ ಡ್ಯಾಕುಮೆಂಟ್‌ನಲ್ಲಿ ಒದಗಿಸಲಾದ ಆಯವ್ಯಯ | ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷಾ ಶುಲ್ಕ ಮರುಪಾವತಿ ಎಲ್ಲಾ ಹೆಣ್ಣು ಮಕ್ಕಳಿಗೆ | ಸರ್ಕಾರೇತರ ಶುಲ್ಕ ಎಲ್ಲಾ ಹೆಣ್ಣು ಮಕ್ಕಳು ಹಾಗೂ ಎಸ್.ಸಿ./ ಎಸ್.ಟಿ. ಗಂಡು ಮಕ್ಕಳು (8,9 ಮತ್ತು 10ನೇ ತರಗತಿ) |
|---|---|---|---|---|
| 1 | 2 | 3 | 4 | 5 |
| 1 | ಬಾಗಲಕೋಟೆ | 14.75 | 1.75 | 13.00 |
| 2 | ಬೆಂಗಳೂರು ಉತ್ತರ | 53.71 | 17.43 | 36.28 |
| 3 | ಬೆಂಗಳೂರು ದಕ್ಷಿಣ | 0.00 | 0.00 | 0.00 |
| 4 | ಬೆಂಗಳೂರು ಗ್ರಾಮಾಂತರ | 31.92 | 15.39 | 16.53 |
| 5 | ರಾಮನಗರ | 16.09 | 0.00 | 16.09 |
| 6 | ಬೆಳಗಾಂ | 47.37 | 23.37 | 24.00 |
| 7 | ಬೆಳಗಾಂ ಉತ್ತರ–ಚಿಕ್ಕೋಡಿ | 0.00 | 0.00 | 0.00 |
| 8 | ಬಳ್ಳಾರಿ | 41.24 | 16.50 | 24.74 |
| 9 | ಬೀದರ್ | 45.60 | 24.60 | 21.00 |
| 10 | ಬಿಜಾಪುರ | 34.35 | 10.80 | 23.55 |
| 11 | ಚಾಮರಾಜನಗರ | 16.72 | 4.22 | 12.50 |
| 12 | ಚಿಕ್ಕಬಳ್ಳಾಪುರ | 30.40 | 16.29 | 14.11 |
| 13 | ಚಿಕ್ಕಮಗಳೂರು | 40.53 | 28.53 | 12.00 |

| ಕ್ರ. ಸಂ. | ಜಿಲ್ಲೆಯ ಹೆಸರು | ಲಿಂಕ್ ಡ್ಯಾಕುಮೆಂಟ್‌ನಲ್ಲಿ ಒದಗಿಸಲಾದ ಆಯವ್ಯಯ | ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷಾ ಶುಲ್ಕ ಮರುಪಾವತಿ ಎಲ್ಲಾ ಹೆಣ್ಣು ಮಕ್ಕಳಿಗೆ | ಸರ್ಕಾರೇತರ ಶುಲ್ಕ ಎಲ್ಲಾ ಹೆಣ್ಣು ಮಕ್ಕಳು ಹಾಗೂ ಎಸ್.ಸಿ./ ಎಸ್.ಟಿ. ಗಂಡು ಮಕ್ಕಳು (8,9 ಮತ್ತು 10ನೇ ತರಗತಿ) |
|---|---|---|---|---|
| 14 | ಚಿತ್ರದುರ್ಗ | 33.14 | 15.50 | 17.64 |
| 15 | ದಕ್ಷಿಣ ಕನ್ನಡ | 62.83 | 22.83 | 40.00 |
| 16 | ದಾವಣಗೆರೆ | 27.71 | 2.21 | 25.50 |
| 17 | ಧಾರವಾಡ | 13.59 | 0.59 | 13.00 |
| 18 | ಗದಗ | 26.06 | 16.06 | 10.00 |
| 19 | ಗುಲ್ಬರ್ಗಾ | 81.74 | 33.00 | 48.74 |
| 20 | ಯಾದಗಿರಿ | 0.00 | 0.00 | 0.00 |
| 21 | ಹಾಸನ | 40.53 | 5.53 | 35.00 |
| 22 | ಹಾವೇರಿ | 30.91 | 17.20 | 13.71 |
| 23 | ಕೊಡಗು | 9.12 | 3.62 | 5.50 |
| 24 | ಕೋಲಾರ | 32.24 | 12.24 | 20.00 |
| 25 | ಕೊಪ್ಪಳ | 30.40 | 12.65 | 17.75 |
| 26 | ತುಮಕೂರು | 35.97 | 5.97 | 30.00 |
| 27 | ಮಧುಗಿರಿ | 0.00 | 0.00 | 0.00 |
| 28 | ಮಂಡ್ಯ | 76.00 | 42.00 | 34.00 |
| 29 | ಮೈಸೂರು | 81.06 | 43.00 | 38.06 |
| 30 | ರಾಯಚೂರು | 30.40 | 3.40 | 27.00 |
| 31 | ಶಿವಮೊಗ್ಗ | 43.73 | 16.73 | 27.00 |
| 32 | ಉಡುಪಿ | 39.52 | 14.52 | 25.00 |
| 33 | ಉತ್ತರ ಕನ್ನಡ | 20.69 | 3.16 | 17.53 |
| | **ಒಟ್ಟು** | **1088.32** | **384.10** | **704.22** |

**ಐ.ಎಫ್. ಮಾಗಿ**

ಪಿ.ಆರ್. 1298

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** 2008–09ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ 10.2.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರ ಸಂಖ್ಯೆ ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–2/2008–09/820.
2. ದಿನಾಂಕ 25.2.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ–12/2008–09/1270.

**ಪ್ರಸ್ತಾವನೆ :**

2008–09ನೇ ಸಾಲಿನ ಆಯವ್ಯಯದ ವಿವಿಧ ಲೆಕ್ಕಶೀರ್ಷಿಕೆಗಳಡಿ ಅಂದಾಜಿನ ಶೇ. 30ರಷ್ಟು ಅನುದಾನದೊಂದಿಗೆ ಸೇರಿರುವ 4 ಕಾಮಗಾರಿಗಳ (ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ) ಅಂದಾಜು ಪಟ್ಟಿಗಳಿಗೆ (ಅಂದಾಜು ಮೊತ್ತ 485.00 ಲಕ್ಷ ರೂ.ಗಳು) ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2008–09ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ಸಣ್ಣ ನೀರಾವರಿ ಬೆಳಗಾವಿ ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ. ಈ ಕಾಮಗಾರಿಗಳು ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಶಕ್ಯವಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕ ಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಟಿಯಾಗಲಿರುವ ಹೊಸ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ಕಾಮಗಾರಿವಾರು ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009 ಭಾಗ–1(2) ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ವ್ಯಾಪ್ತಿಗೆ ಬರುವ ಅಡಕಗಳಿಸಿರುವ ಅನುಬಂಧದಲ್ಲಿ ತಿಳಿಸಿರುವ ಒಟ್ಟು ರೂ. 485.00 ಲಕ್ಷ (ನಾಲ್ಕು ನೂರ ಎಂಬತ್ತೈದು ಲಕ್ಷ ರೂ.) ಮೊತ್ತದ 4 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4. ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯು ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.
5. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6. ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
7. ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
8. ಇ.ಐ.ಆರ್.ಎಲ್./ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
10. ನೇರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16.5.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ ಸನೀಇ 15 ಮಸಾವಿ 2009 ಭಾಗ–1(2), ದಿನಾಂಕ 28.2.2009**

(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತ ವಾಗಿರುವ ಅಂದಾಜು ಮೊತ್ತ | ಅನುಬಂಧ–ಇ ವಿವರಗಳು | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪಿಸಲಾಗುವ/ ಸ್ಥಿರೀಕರಿಸುವ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| **ಲೆಕ್ಕ ಶೀರ್ಷಿಕೆ 4702–00–101–1–02–139 ಹೊಸ ಕೆರೆಗಳ ನಿರ್ಮಾಣ (ಪ್ರಧಾನ ಕಾಮಗಾರಿಗಳು)** | | | | | | | | | |
| 1 | ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕಿನ ಕೂಡ್ಲಿ ಅಲ್ಲಾಪುರ ಕೆರೆ ಗ್ರಾಮಸ್ಥರ ಪುನರ್ವಸತಿ ನಿರ್ಮಾಣ | 300.00 | 300.00 | 90.00 | ಕೃಷ್ಣಾ | ಪುನರುಜ್ಜೀವನ ಕಾಮಗಾರಿ | 0 | 0 | ಕೂಡ್ಲಿ ಅಲ್ಲಾಪುರ ಕೆರೆ ಕಾಮಗಾರಿಯಿಂದ ನಿರ್ವಸತಿಗೊಳಗಾಗುವ ಅಲ್ಲಾಪುರ ಗ್ರಾಮಸ್ಥರ ಪುನರ್ವಸತಿ ಕಾಮಗಾರಿ |
| **ಲೆಕ್ಕ ಶೀರ್ಷಿಕೆ 4702–00–101–1–07–139 ಕೆರೆಗಳ ಆಧುನೀಕರಣ (ಪ್ರಧಾನ ಕಾಮಗಾರಿಗಳು)** | | | | | | | | | |
| 2 | ಉತ್ತರ ಕನ್ನಡ ಜಿಲ್ಲೆ ಮುಂಡಗೋಡ ತಾಲ್ಲೂಕಿನ ನ್ಯಾಸರ್ಗಿ ಕೆರೆ ಹಾಗೂ ಕಾಲುವೆ ಆಧುನೀಕರಣ | 50.00 | 50.00 | 15.00 | ಪಶ್ಚಿಮ ವಾಹಿನಿ | ಪುನರುಜ್ಜೀವನ ಕಾಮಗಾರಿ | 0 | 393 | ಕೆರೆಯ ಏರಿ, ಕಾಲುವೆಗಳ ಅಭಿವೃದ್ಧಿ |
| **ಲೆಕ್ಕ ಶೀರ್ಷಿಕೆ 4702–00–101–5–01–139 ಅಣೆಕಟ್ಟು ಮತ್ತು ಪಿಕಪ್ – ಪ್ರಧಾನ ಕಾಮಗಾರಿಗಳು** | | | | | | | | | |
| 3 | ಉತ್ತರ ಕನ್ನಡ ಜಿಲ್ಲೆ ಹಳಿಯಾಳ ತಾಲ್ಲೂಕಿನ ಖಾಮಡೊಳ್ಳಿ ಗ್ರಾಮದ ಹತ್ತಿರ ಬಾಂಧಾರ ನಿರ್ಮಾಣ | 45.00 | 45.00 | 13.50 | ಪಶ್ಚಿಮ ವಾಹಿನಿ | ಹೊಸ ಕಾಮಗಾರಿ | 50 | | ಹೊಸ ಬ್ಯಾರೇಜ್ ನಿರ್ಮಾಣ ಬ್ಯಾರೇಜಿನ ಉದ್ದ 34.00 ಮೀ. ಎತ್ತರ 3.00 ಮೀ. ಮುಖ್ಯ ಪಿಯರ್‌ಗಳ ಸಂಖ್ಯೆ–6 ಹಾಗೂ ನೆಪಮಾತ್ರ ಪಿಯರ್‌ಗಳ ಸಂಖ್ಯೆ 7 ಮತ್ತು ಶೇ. 10ರ ಬಡ್ಡಿ ದರದಲ್ಲಿ ಲಾಭ ವೆಚ್ಚದ ಅನುಪಾತ 1.02 ಆಗಿರುತ್ತದೆ. |
| 4 | ಉತ್ತರ ಕನ್ನಡ ಜಿಲ್ಲೆ ಕಾರವಾರ ತಾಲ್ಲೂಕಿನ ಕಿನ್ನರ್ ಖಾರ್ ಲ್ಯಾಂಡ್ ಯೋಜನೆಯ ಮರು ನಿರ್ಮಾಣ | 90.00 | 90.00 | 27.00 | ಪಶ್ಚಿಮ ವಾಹಿನಿ | ಪುನರುಜ್ಜೀವನ ಕಾಮಗಾರಿ | | 299 | ಖಾರ್ ಲ್ಯಾಂಡ್ ಪುನರ್ ನಿರ್ಮಾಣ ತೂಬು ಹಾಗೂ ಏರಿಯಾ ದುರಸ್ತಿ |
| | **ಲೆಕ್ಕಶೀರ್ಷಿಕೆ 4702–00–101–5–01–139 ಅಣೆಕಟ್ಟು ಒಟ್ಟು** | **135.00** | **135.00** | **40.50** | | | | | |
| | **ಒಟ್ಟು** | **485.00** | **485.00** | **145.50** | | | | | |

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 858

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಶಿಕ್ಷಣ ಸಚಿವಾಲಯ**

**ವಿಷಯ :** 2007–08ನೇ ಸಾಲಿಗೆ ಮಂಜೂರಾದ ಸರ್ಕಾರಿ ಪಾಲಿಟೆಕ್ನಿಕ್‌ಗಳ ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 174 ಯೋಯೋಕ 2007, ದಿನಾಂಕ 23.7.2007.
2. ಸರ್ಕಾರದ ಆದೇಶ ಸಂಖ್ಯೆ: ಇಡಿ 83 ಯೋಯೋಕ 2008, ದಿನಾಂಕ 26.4.2008.
3. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು ಅವರ ಪತ್ರ ಸಂಖ್ಯೆ: ಡಿ.ಟಿ.ಇ. 60 ಬಿ.ಎಲ್.ಡಿ. 2007, ದಿನಾಂಕ 30.7.2008.

**ಪ್ರಸ್ತಾವನೆ :**

1) 2007–08ನೇ ಸಾಲಿಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 174 ಯೋಯೋಕ 2007, ದಿನಾಂಕ 23.7.2007ರಂದು ರಾಜ್ಯದಲ್ಲಿ 21 ಸರ್ಕಾರಿ ಪಾಲಿಟೆಕ್ನಿಕ್‌ಗಳನ್ನು ಪ್ರಾರಂಭಿಸಲು ಅನುಮೋದನೆ ನೀಡಲಾಗಿದೆ.

2) ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮುಂದುವರಿಕೆ ಕಾರ್ಯಕ್ರಮಗಳ ಅನುಷ್ಠಾನ ಆದೇಶದಲ್ಲಿ 2008–09ನೇ ಸಾಲಿಗೆ ಮಂಜೂರಾದ 21 ಸರ್ಕಾರಿ ಪಾಲಿಟೆಕ್ನಿಕ್‌ಗಳಿಗೆ ಕಟ್ಟಡವನ್ನು ನಿರ್ಮಿಸಲು ಲೆಕ್ಕ ಶೀರ್ಷಿಕೆ 4202–02–104–1–01–139 ರಡಿಯಲ್ಲಿ 2000.00 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ. ಪರಿಷ್ಕೃತ ಆಯವ್ಯಯದಲ್ಲಿ ಸದರಿ ಕಾರ್ಯಕ್ರಮಕ್ಕೆ 3000.00 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ.

3) ಮೇಲೆ (3)ರಲ್ಲಿ ಓದಲಾದ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರದಲ್ಲಿ ರಾಜ್ಯದಲ್ಲಿ 2007–08ನೇ ಸಾಲಿಗೆ ಮಂಜೂರಾದ 21 ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿ ಈ ಕೆಳಕಂಡ 18 ಸರ್ಕಾರಿ ಪಾಲಿಟೆಕ್ನಿಕ್‌ಗಳಿಗೆ ಕಟ್ಟಡವನ್ನು ಒದಗಿಸುವ ಸಂಬಂಧ ನಕ್ಷೆ ಮತ್ತು ಅಂದಾಜು ಪಟ್ಟಿಗಳು ಬಂದಿದ್ದು, 2008–09ನೇ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಅದಕ್ಕೆ ಅನುದಾನ ಬಿಡುಗಡೆ ಮಾಡಿ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ. ಅದರ ವಿವರ ಈ ಕೆಳಕಂಡಂತಿದೆ.

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | 2008–09ನೇ ಸಾಲಿಗೆ ಒದಗಿಸಿರುವ ಅನುದಾನ |
|---|---|---|---|
| 1 | ಸರ್ಕಾರಿ ಪಾಲಿಟೆಕ್ನಿಕ್, ಬೇಲೂರು | 800.00 | 240.00 |
| 2 | ಸರ್ಕಾರಿ ಪಾಲಿಟೆಕ್ನಿಕ್, ಹೊಳೇನರಸೀಪುರ | 800.00 | 240.00 |
| 3 | ಸರ್ಕಾರಿ ಪಾಲಿಟೆಕ್ನಿಕ್, ರಾಮನಗರ | 800.00 | 240.00 |
| 4 | ಸರ್ಕಾರಿ ಪಾಲಿಟೆಕ್ನಿಕ್, ಮಿರ್ಲೆ | 800.00 | 240.00 |
| 5 | ಬೀಳಗಿ ಸರ್ಕಾರಿ ಪಾಲಿಟೆಕ್ನಿಕ್ | 800.00 | 240.00 |
| 6 | ಬಾಗಲಕೋಟೆ ಸರ್ಕಾರಿ ಪಾಲಿಟೆಕ್ನಿಕ್ | 800.00 | 240.00 |
| 7 | ಹಾನಗಲ್ ಸರ್ಕಾರಿ ಪಾಲಿಟೆಕ್ನಿಕ್ | 800.00 | 240.00 |
| 8 | ಮುಳಬಾಗಿಲು ಸರ್ಕಾರಿ ಪಾಲಿಟೆಕ್ನಿಕ್ | 800.00 | 240.00 |
| 9 | ಸರ್ಕಾರಿ ಪಾಲಿಟೆಕ್ನಿಕ್, ಶ್ರೀರಂಗಪಟ್ಟಣ | 800.00 | 240.00 |
| 10 | ಸರ್ಕಾರಿ ಪಾಲಿಟೆಕ್ನಿಕ್, ನಾಗಮಂಗಲ | 800.00 | 240.00 |
| 11 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಶಿರಾಳ ಕೊಪ್ಪ | 800.00 | 240.00 |
| 12 | ಸರ್ಕಾರಿ ಪಾಲಿಟೆಕ್ನಿಕ್, ಗದಗ | 800.00 | 240.00 |
| 13 | ಸರ್ಕಾರಿ ಪಾಲಿಟೆಕ್ನಿಕ್, ತುರುವೇಕೆರೆ | 800.00 | 240.00 |
| 14 | ಸರ್ಕಾರಿ ಪಾಲಿಟೆಕ್ನಿಕ್, ಗಜೇಂದ್ರಘಡ | 800.00 | 240.00 |
| 15 | ಸರ್ಕಾರಿ ಪಾಲಿಟೆಕ್ನಿಕ್, ಅಫ್‌ಜಲ್‌ಪುರ | 800.00 | 240.00 |
| 16 | ಸರ್ಕಾರಿ ಪಾಲಿಟೆಕ್ನಿಕ್, ಜೋಯಿಡಾ | 800.00 | 240.00 |

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | 2008–09ನೇ ಸಾಲಿಗೆ ಒದಗಿಸಿರುವ ಅನುದಾನ |
|---|---|---|---|
| 17 | ಸರ್ಕಾರಿ ಪಾಲಿಟೆಕ್ನಿಕ್, ಲಿಂಗಸುಗೂರು | 800.00 | 240.00 |
| 18 | ಸರ್ಕಾರಿ ಪಾಲಿಟೆಕ್ನಿಕ್, ಚಿತ್ರದುರ್ಗ | 800.00 | 240.00 |
| | **ಒಟ್ಟು** | **14400.00** | **4320.00** |

4) ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಶಿಇ 174 ಯೋಯೋಕ 2007, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2008**

**(ಇಡಿ 169 ಸ್ಪೀಮರ (ಯುನಿಕ್) 2008, ದಿನಾಂಕ 22.10.2008)**

5) 2007–08ನೇ ಸಾಲಿನಲ್ಲಿ ಮಂಜೂರಾಗಿರುವ 21 ಸರ್ಕಾರಿ ಪಾಲಿಟೆಕ್ನಿಕ್‌ಗಳ ಪೈಕಿ ಈ ಕೆಳಕಂಡ 18 ಸರ್ಕಾರಿ ಪಾಲಿಟೆಕ್ನಿಕ್‌ಗಳಿಗೆ ಕಟ್ಟಡವನ್ನು ಒದಗಿಸಲು ಅವುಗಳ ಮುಂದೆ ತೋರಿಸಿರುವ ಅಂದಾಜು ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತನ್ನು ವಿಧಿಸಿ ಅನುಮೋದನೆ ನೀಡಲಾಗಿದೆ.

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | 2008–09ನೇ ಸಾಲಿಗೆ ಒದಗಿಸಿರುವ ಅನುದಾನ |
|---|---|---|---|
| 1 | ಸರ್ಕಾರಿ ಪಾಲಿಟೆಕ್ನಿಕ್, ಬೇಲೂರು | 800.00 | 240.00 |
| 2 | ಸರ್ಕಾರಿ ಪಾಲಿಟೆಕ್ನಿಕ್, ಹೊಳೇನರಸೀಪುರ | 800.00 | 240.00 |
| 3 | ಸರ್ಕಾರಿ ಪಾಲಿಟೆಕ್ನಿಕ್, ರಾಮನಗರ | 800.00 | 240.00 |
| 4 | ಸರ್ಕಾರಿ ಪಾಲಿಟೆಕ್ನಿಕ್, ಮಿರ್ಲೆ | 800.00 | 240.00 |
| 5 | ಬೀಳಗಿ ಸರ್ಕಾರಿ ಪಾಲಿಟೆಕ್ನಿಕ್ | 800.00 | 240.00 |
| 6 | ಬಾಗಲಕೋಟೆ ಸರ್ಕಾರಿ ಪಾಲಿಟೆಕ್ನಿಕ್ | 800.00 | 240.00 |
| 7 | ಹಾನಗಲ್ ಸರ್ಕಾರಿ ಪಾಲಿಟೆಕ್ನಿಕ್ | 800.00 | 240.00 |
| 8 | ಮುಳಬಾಗಿಲು ಸರ್ಕಾರಿ ಪಾಲಿಟೆಕ್ನಿಕ್ | 800.00 | 240.00 |
| 9 | ಸರ್ಕಾರಿ ಪಾಲಿಟೆಕ್ನಿಕ್, ಶ್ರೀರಂಗಪಟ್ಟಣ | 800.00 | 240.00 |
| 10 | ಸರ್ಕಾರಿ ಪಾಲಿಟೆಕ್ನಿಕ್, ನಾಗಮಂಗಲ | 800.00 | 240.00 |
| 11 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಶಿರಾಳ ಕೊಪ್ಪ | 800.00 | 240.00 |
| 12 | ಸರ್ಕಾರಿ ಪಾಲಿಟೆಕ್ನಿಕ್, ಗದಗ | 800.00 | 240.00 |
| 13 | ಸರ್ಕಾರಿ ಪಾಲಿಟೆಕ್ನಿಕ್, ತುರುವೇಕೆರೆ | 800.00 | 240.00 |
| 14 | ಸರ್ಕಾರಿ ಪಾಲಿಟೆಕ್ನಿಕ್, ಗಜೇಂದ್ರಘಡ | 800.00 | 240.00 |
| 15 | ಸರ್ಕಾರಿ ಪಾಲಿಟೆಕ್ನಿಕ್, ಅಫ್‌ಜಲ್‌ಪುರ | 800.00 | 240.00 |
| 16 | ಸರ್ಕಾರಿ ಪಾಲಿಟೆಕ್ನಿಕ್, ಜೋಯಿಡಾ | 800.00 | 240.00 |
| 17 | ಸರ್ಕಾರಿ ಪಾಲಿಟೆಕ್ನಿಕ್, ಲಿಂಗಸುಗೂರು | 800.00 | 240.00 |
| 18 | ಸರ್ಕಾರಿ ಪಾಲಿಟೆಕ್ನಿಕ್, ಚಿತ್ರದುರ್ಗ | 800.00 | 240.00 |
| | **ಒಟ್ಟು** | **14400.00** | **4320.00** |

**ಷರತ್ತುಗಳು:**

* ಸದರಿ ಕಾಮಗಾರಿಗಳನ್ನು ಅವುಗಳ ಮುಂದೆ ತೋರಿಸಿರುವ ಅನುದಾನದಲ್ಲಿ ಕೂಡಲೇ ಪ್ರಾರಂಭಿಸಲು ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

* ಸದರಿ ಕಟ್ಟಡಗಳ ನಿರ್ಮಾಣ ಕಾರ್ಯವನ್ನು ಲೋಕೋಪಯೋಗಿ ಇಲಾಖೆ ಮೂಲಕ ಕೈಗೆತ್ತಿಕೊಳ್ಳುವಂತೆ ಸೂಚಿಸಲಾಗಿದೆ.
* ಕಟ್ಟಡ ನಿರ್ಮಾಣದ ಗುಣಮಟ್ಟದ ಬಗ್ಗೆ ನಿಗಾ ವಹಿಸಲು ಸಂಬಂಧಿಸಿದ ಕಾಲೇಜುಗಳ ಪ್ರಾಂಶುಪಾಲರಿಗೆ ಸೂಕ್ತ ನಿರ್ದೇಶನ ನೀಡತಕ್ಕದ್ದು.
* ಕೇಂದ್ರ ಕಛೇರಿಯಿಂದ ತಿಂಗಳಿಗೊಮ್ಮೆ ಕಟ್ಟಡ ನಿರ್ಮಾಣದ ಕಾಮಗಾರಿ ಅಭಿವೃದ್ಧಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.
* ಕಟ್ಟಡ ನಿರ್ಮಾಣ ಕಾರ್ಯವನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
* ಕಟ್ಟಡವನ್ನು ಪೂರ್ಣಗೊಳಿಸಿ ಕಾಲೇಜಿಗೆ ಹಸ್ತಾಂತರಿಸಿದ ನಂತರ ಸಂಬಂಧಿಸಿದ ಕಾಲೇಜಿನ ಪ್ರಾಂಶುಪಾಲರು ಪ್ರಮಾಣ ಪತ್ರವನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಅವರಿಗೆ ಸೂಚನೆ ನೀಡುವುದು.
* ಪ್ರತಿ ಮಾಹೆಯ ಕಾಮಗಾರಿಯ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್. ವರದಿಯಲ್ಲಿ ನಮೂದಿಸತಕ್ಕದ್ದು. ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡಲು ಸೂಚಿಸಿದೆ.

6) 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ: 4202–02–104–1–01–139 (ಯೋಜನೆ) ಅಡಿಯಲ್ಲಿ ಒದಗಿಸಲಾಗಿರುವ 3000.00 ಲಕ್ಷ ರೂಪಾಯಿಗಳ (ಮೂರು ಸಾವಿರ ಲಕ್ಷ ರೂಪಾಯಿಗಳು ಮಾತ್ರ) ಅನುದಾನದಲ್ಲಿ ಮುಂದುವರೆದ ಕಾಮಗಾರಿಗಳಿಗೆ ಈಗಾಗಲೇ ಬಿಡುಗಡೆ ಮಾಡಿರುವ ಅನುದಾನ 1080.00 ಲಕ್ಷ ರೂಪಾಯಿಗಳನ್ನು (ಒಂದು ಸಾವಿರದ ಎಂಬತ್ತು ಲಕ್ಷ ರೂಪಾಯಿಗಳು ಮಾತ್ರ) ಹೊರತುಪಡಿಸಿ ಉಳಿಕೆ 1920.00 (ಒಂದು ಸಾವಿರದ ಒಂಭೈನೂರಾ ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಲಕ್ಷ ರೂಪಾಯಿಗಳಲ್ಲಿ ಕೂಡಲೇ ಕಾಮಗಾರಿಯನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿದೆ. ಮುಂದೆ ಹೆಚ್ಚುವರಿ ಆಯವ್ಯಯವನ್ನು ಬಿಡುಗಡೆ ಮಾಡಲು ಪ್ರತ್ಯೇಕ ಆದೇಶವನ್ನು ಹೊರಡಿಸಲಾಗುವುದು.

7) ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆ.ಇ. 982/ವೆಚ್ಚ–8/08, ದಿನಾಂಕ 6.10.08ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1496

**ಐ.ಎಫ್. ಮಾಗಿ**

ವಿಶೇಷಾದಿಕಾರಿ, ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಯೋಜನೆ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** 2008–09ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ 31.12.2008ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಸದ/ತಾಂ.1/ಸ.ಇಂ.–1/4702 ಸ.ಆ.ಅ./2008–09/4579.
2. ದಿನಾಂಕ 31.12.2008ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಸದ/ತಾತ2/ಸ.ಇಂ.–5/4702ಸ.ಆ.ಅ./2008–09/4589.

**ಪ್ರಸ್ತಾವನೆ :**

2008–09ನೇ ಸಾಲಿನ ಆಯವ್ಯಯದ "ಅಪೆಂಡಿಕ್ಸ್–ಇ"ನ ಲೆಕ್ಕ ಶೀರ್ಷಿಕೆ 4702–00–101–1–07–139–ಕೆರೆಗಳ ಆಧುನೀಕರಣ (ಪ್ರಧಾನ ಕಾಮಗಾರಿಗಳು) ಅಡಿ ಅಂದಾಜಿನ ಶೇ. 30ರಷ್ಟು ಅನುದಾನದೊಂದಿಗೆ ಸೇರಿರುವ ಒಟ್ಟು 5 ಕಾಮಗಾರಿಗಳ (ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ) ಅಂದಾಜು ಪಟ್ಟಿಗಳಿಗೆ (ಒಟ್ಟು ಅಂದಾಜು ಮೊತ್ತ 475.00 ಲಕ್ಷ ರೂ.ಗಳು) ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2008–09ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ಸಣ್ಣ ನೀರಾವರಿ ಬೆಂಗಳೂರು/ಮೈಸೂರು ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ. ಈ ಎಲ್ಲಾ 5 ಕಾಮಗಾರಿಗಳು ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಶಕ್ಯವಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕ ಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಟಿಯಾಗಲಿರುವ ಹೊಸ ಅಚ್ಚುಕಟ್ಟು/ ಸ್ಥಿರೀಕರಿಸಲಾಗುತ್ತಿರುವ/ಪುನರ್ ಸ್ಥಾಪಿಸಲಾಗುತ್ತಿರುವ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ಕಾಮಗಾರಿವಾರು ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಮಸಾವಿ 2009(3), ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ವ್ಯಾಪ್ತಿಗೆ ಬರುವ ಈ ಆದೇಶದ ಅನುಬಂಧದಲ್ಲಿ ತಿಳಿಸಿರುವ ಒಟ್ಟು 475.00 ಲಕ್ಷ ರೂ.ಗಳ (ನಾಲ್ಕು ನೂರ ಎಪ್ಪತ್ತೈದು ಲಕ್ಷ ರೂ.ಗಳು ಮಾತ್ರ) ಅಂದಾಜು ಮೊತ್ತದ 5 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4) ಕಾಮಗಾರಿಯ ಅಂದಾಜು ಪಟ್ಟಿಗಳನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯ ಸಭೆಯಲ್ಲಿ ಮಂಡಿಸಿ ತೀರುವಳಿಯನ್ನು ಪಡೆಯುವುದು.
5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
7) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
8) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
10) ನೇರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16.5.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಅನುಬಂಧ

### ಸರ್ಕಾರದ ಆದೇಶ ಸಂಖ್ಯೆ ಸನೀಇ 14 ಮಸಾವಿ 2009, (3) ದಿನಾಂಕ 4.2.2009

(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)

| ಕ್ರ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತವಾದ ಅಂದಾಜು ಪಟ್ಟಿ ಮೊತ್ತ | ಅನುಬಂಧ–ಇ ವಿವರಗಳು | | ನದಿ ಕಣಿವೆ | ಕಾಮಗಾರಿ ವಿಧ | ಒಟ್ಟು ವೆಚ್ಚ | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | |
| | | | **ಲೆಕ್ಕ ಶೀರ್ಷಿಕೆ 4702–00–101–1–07–139** | | | | | |
| 1 | ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು ಅಯ್ಯನ ಕೆರೆ ಬಸವನ ಕಾಲುವೆ ಅಭಿವೃದ್ಧಿ ಕಾಮಗಾರಿ (ಸಕರಾಯಪಟ್ಟಣ ಗ್ರಾಮ ಪರಿವಿಧಿ) | 40.00 | 40.00 | 12.00 | ಕೃಷ್ಣಾ | ಸುಧಾರಣೆ ಕಾಮಗಾರಿ | 0.00 | ಗೈಡ ವಾಲ್ ನಿರ್ಮಾಣ ಮತ್ತು ಅಡ್ಡಮೋರಿ ನಿರ್ಮಾಣ |
| 2 | ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ತಾಲ್ಲೂಕು ಹಿರೇಕೊಳಲೆ ಕೆರೆ ಅಭಿವೃದ್ಧಿ ಕಾಮಗಾರಿ | 285.00 | 285.00 | 85.50 | ಕಾವೇರಿ | ಪುನರುಜ್ಜೀವನ ಕಾಮಗಾರಿ | 0.00 | ಕೆರೆಯ ಅಂಗಳದಲ್ಲಿ ಹೂಳೆತ್ತುವುದು ಇತ್ಯಾದಿ |
| 3 | ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ತಾಲ್ಲೂಕು ತಂಗಲಿ ಊರ ಮುಂದಿನ ಕೆರೆ ಅಭಿವೃದ್ಧಿ ಕಾಮಗಾರಿ | 75.00 | 75.00 | 22.50 | ಕೃಷ್ಣಾ | ಪುನರುಜ್ಜೀವನ ಕಾಮಗಾರಿ | 0.00 | ಏರಿ ಅಭಿವೃದ್ಧಿ, ಕೆರೆ ಅಂಗಳದಲ್ಲಿ ಹೂಳು ತೆಗೆಯುವುದು ಹಾಗೂ ಫೀಡರ್ ನಾಲೆ ಅಭಿವೃದ್ಧಿ |
| 4 | ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು ಅಯ್ಯನ ಕೆರೆ ಊರು ಕಾಲುವೆ ಸೇವಾ ರಸ್ತೆ ಹಾಗೂ ಕಾಲುವೆ ಅಭಿವೃದ್ಧಿ ಕಾಮಗಾರಿ | 35.00 | 35.00 | 10.50 | ಕೃಷ್ಣಾ | ಸುಧಾರಣೆ ಕಾಮಗಾರಿ | 0.00 | ಸೇವಾ ರಸ್ತೆ ಅಭಿವೃದ್ಧಿ |
| 5 | ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಕೂಳಗೆರೆ ಕೆರೆ ಅಭಿವೃದ್ಧಿ ಕಾಮಗಾರಿ | 40.00 | 40.00 | 12.00 | ಕಾವೇರಿ | ಪುನರುಜ್ಜೀವನ ಕಾಮಗಾರಿ | | ಜಂಗಲ್ ಕ್ಲಿಯರೆನ್ಸ್, ಗೈಡ್ ವಾಲ್ ನಿರ್ಮಾಣ, ಕೆರೆ ಅಂಗಳದಲ್ಲಿ ಹೂಳು ತೆಗೆಯುವುದು ಇತ್ಯಾದಿ. |
| | **ಒಟ್ಟು** | **475.00** | **475.00** | **142.50** | | | | |

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 502

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ :** ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರ ವಿರುದ್ಧದ ಇಲಾಖಾ ವಿಚಾರಣೆ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಜಿಲ್ಲಾಧಿಕಾರಿಗಳು, ಬೀದರ್, ಕಚೇರಿಯ ಆದೇಶ ಸಂಖ್ಯೆ: ಕಂ/ಸಿಬ್ಬಂದಿ/ಸಿಆರ್/ಜಿಎ/2008–09/4770, ದಿ: 16.8.2008.
2. ಕೆ.ಎ.ಟಿ. ಅರ್ಜಿ ಸಂಖ್ಯೆ: 4069/2008ರಲ್ಲಿ ಮಾನ್ಯ ನ್ಯಾಯಮಂಡಳಿಯು ದಿ: 13.10.2008ರಂದು ನೀಡಿರುವ ತೀರ್ಪು.
3. ಸರ್ಕಾರದ ಆದೇಶ ಸಂಖ್ಯೆ: ಮಮಇ 460 ಎಸ್‌ಜೆಡಿ 2008, ದಿ: 23.12.2008.
4. ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ್ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಗುಲ್ಬರ್ಗಾ ರವರ ಮನವಿ ದಿ: 13.1.2009.

**ಪ್ರಸ್ತಾವನೆ :**

ಬೀದರ್ ನಗರದಲ್ಲಿ ನಡೆಯುತ್ತಿರುವ ಅಂಗನವಾಡಿ ಕೇಂದ್ರಗಳ ಕಾರ್ಯನಿರ್ವಹಣೆ ಬಗ್ಗೆ ಸಾರ್ವಜನಿಕರಿಂದ ಹಾಗೂ ಚುನಾಯಿತ ಪ್ರತಿನಿಧಿಗಳಿಂದ ಅನೇಕ ಬಾರಿ ದೂರುಗಳು ಬಂದ ಹಿನ್ನೆಲೆಯಲ್ಲಿ ಅಂಗನವಾಡಿ ಕೇಂದ್ರಗಳ ತಪಾಸಣೆಯನ್ನು ಹಿರಿಯ ಅಧಿಕಾರಿಗಳಿಂದ ನಡೆಸಿ ಕೇಂದ್ರಗಳ ತಪಾಸಣೆ ಬಳಿಕ ನ್ಯೂನತೆಗಳು ಇರುವುದು ವರದಿಯಾಗಿರುವ ಕುರಿತು ದಿ: 16.8.2008ರ ಜನಸ್ಪಂದನ ಸಮಿತಿ ಸಭೆಯಲ್ಲಿ ವಿವರವಾಗಿ ಚರ್ಚಿಸಿ ತಪಾಸಣೆ ತಂಡದವರ ಅಭಿಪ್ರಾಯದ ಪ್ರಕಾರ ಅಂಗನವಾಡಿ ಕೇಂದ್ರಗಳ ಕಾರ್ಯನಿರ್ವಹಣೆ ತೃಪ್ತಿಕರವಾಗಿಲ್ಲದಿರುವುದನ್ನು ಮನಗಂಡು, ಅನೇಕ ಅಂಗನವಾಡಿ ಕೇಂದ್ರಗಳಿಗೆ ವರ್ಷ ಕಳೆದರು ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಉಪ ನಿರ್ದೇಶಕರು ಹಾಗೂ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರು ನಿಯಮಿತವಾಗಿ ಭೇಟಿ ನೀಡಿ ಮೇಲ್ವಿಚಾರಣೆ ಮಾಡದೆ ಇರುವುದರಿಂದ ಈ ಕಾರ್ಯಕ್ರಮವು ಒಂದು ಖೋಟಾ ಕಾರ್ಯಕ್ರಮವಾಗಿ ಪರಿಗಣಿಸಿದ್ದು, ಮಕ್ಕಳು ಹಾಗೂ ಸ್ತ್ರೀಯರಿಗಾಗಿ ರೂಪಿಸಿದ ಕಾರ್ಯಕ್ರಮವನ್ನು ಬುಡಮೇಲೂ ಮಾಡಿದಂತಾಗಿರುವುದು ಮೇಲ್ನೋಟಕ್ಕೆ ಕಂಡು ಬಂದ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿ, ಬೀದರ್ ರವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿ: 16.8.2008ರ ಆದೇಶದಲ್ಲಿ ಶ್ರೀ ರಾಮಕೃಷ್ಣ ಟಿ. ಪಡಗಣ್ಣವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರನ್ನು ಅಮಾನತ್ತುಗೊಳಿಸಿ ಆದೇಶ ಹೊರಡಿಸಿರುತ್ತಾರೆ.

ಜಿಲ್ಲಾಧಿಕಾರಿಗಳು ಬೀದರ್ ರವರು ಅಮಾನತ್ತುಗೊಳಿಸಿ ಹೊರಡಿಸಿರುವ ದಿ: 16.8.2008ರ ಆದೇಶವನ್ನು ಪ್ರಶ್ನಿಸಿ ಶ್ರೀ ರಾಮಕೃಷ್ಣ ಟಿ. ಪಡಗಣ್ಣವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ: 4069/2008ರಲ್ಲಿ ಮೊಕದ್ದಮೆ ಹೂಡಿ, ಜಿಲ್ಲಾಧಿಕಾರಿ, ಬೀದರ್ ರವರು ಅಮಾನತ್ತುಗೊಳಿಸಿ ಹೊರಡಿಸಿರುವ ದಿ: 16.8.2008ರ ಆದೇಶವನ್ನು ರದ್ದುಗೊಳಿಸುವಂತೆ ಕೋರಲಾಗಿತ್ತು. ಸದರಿ ಪ್ರಕರಣವನ್ನು ಮಾನ್ಯ ನ್ಯಾಯಮಂಡಳಿಯು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿ: 13.10.2008ರಂದು ವಿಚಾರಣೆ ನಡೆಸಿ ಶಿಸ್ತು ಪ್ರಾಧಿಕರವಲ್ಲದ ಹಾಗೂ ಜಿಲ್ಲಾಧಿಕಾರಿಗಳಿಗೆ ಗ್ರೂಪ್ 'ಎ' ಅಧಿಕಾರಿಯನ್ನು ಅಮಾನತ್ತುಗೊಳಿಸಲು ಅಧಿಕಾರವಿಲ್ಲದಿದ್ದರೂ ಸಹ ಜಿಲ್ಲಾಧಿಕಾರಿಗಳು, ಬೀದರ್‌ರವರು ದಿ: 16.8.2008ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ಗಂಭೀರವಾಗಿ ಪರಿಗಣಿಸಿ ಜಿಲ್ಲಾಧಿಕಾರಿಗಳಿಗೆ ರೂ. 5,000/–ಗಳನ್ನು ದಂಡವನ್ನಾಗಿ ಪಾವತಿಸುವಂತೆ ಹಾಗೂ ಜಿಲ್ಲಾಧಿಕಾರಿಗಳು ಹೊರಡಿಸಿರುವ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ತೀರ್ಪು ನೀಡಿರುತ್ತದೆ. ಮಾನ್ಯ ನ್ಯಾಯಮಂಡಳಿಯು ದಿ: 13.10.2008ರಂದು ನೀಡಿರುವ ತೀರ್ಪನ್ನು ಕಾನೂನು ಕೋಶದ ಮುಖ್ಯಸ್ಥರು ಪರಿಶೀಲಿಸಿ ಸದರಿ ತೀರ್ಪು ಮೇಲ್ಮನವಿಗೆ ಅರ್ಹ ಪ್ರಕರಣವಲ್ಲವೆಂದು ತಿಳಿಸಿರುತ್ತಾರೆ. ಸರ್ಕಾರವು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿ: 13.10.2008ರ ತೀರ್ಪು ಹಾಗೂ ಕಾನೂನು ಕೋಶದ ಮುಖ್ಯಸ್ಥರು ನೀಡಿರುವ ಅಭಿಪ್ರಾಯ ಹಾಗೂ ಪ್ರಕರಣದ ವಾಸ್ತವಾಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿ: 23.12.2008ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು ಬೀದರ್ ರವರು ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರನ್ನು ಕಚೇರಿ ಆದೇಶ ಸಂಖ್ಯೆ: ಸಿಬ್ಬಂದಿ/ಸಿಆರ್/ಜಿಎ/ 2008–09/4770, ದಿ: 16.8.2008ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಇವರ ವಿರುದ್ಧ ಇರುವ ಆರೋಪಗಳನ್ನು ಹಿಂಪಡೆದು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ಪುನರ್ ಸ್ಥಾಪಿಸಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಗುಲ್ಬರ್ಗಾ ಇಲ್ಲಿನ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಅವರು

ಇನ್ನು ಮುಂದೆ ಅವರ ಕಾರ್ಯನಿರ್ವಹಣೆಯಲ್ಲಿ ಎಚ್ಚರಿಕೆ ವಹಿಸುವಂತೆ ಅವರಿಗೆ ಒಂದು ಆಡಳಿತಾತ್ಮಕ ಎಚ್ಚರಿಕೆಯನ್ನು ನೀಡಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿ: 13.1.2009ರ ಮನವಿಯಲ್ಲಿ ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ್, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಗುಲ್ಬರ್ಗಾ ರವರು ಬೀದರ್ ಜಿಲ್ಲಾಧಿಕಾರಿಗಳು ಹೊರಡಿಸಿರುವ ಆದೇಶವನ್ನು ಕರ್ನಾಟಕ ಆಡಳಿತ ನ್ಯಾಯಮಂಡಳಿಯು ದಿ: 13.10.2008ರ ಆದೇಶದಲ್ಲಿ ಅನೂರ್ಜಿತಗೊಳಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ದಿ: 23.12.2008ರಂದು ಆದೇಶ ಹೊರಡಿಸಿ ತಮ್ಮ ವಿರುದ್ಧ ಇವರು ಆರೋಪಗಳನ್ನು ಹಿಂಪಡೆದು ಇನ್ನು ಮುಂದೆ ಕಾರ್ಯನಿರ್ವಹಣೆಯಲ್ಲಿ ಎಚ್ಚರ ವಹಿಸುವಂತೆ ಆಡಳಿತಾತ್ಮಕ ಎಚ್ಚರಿಕೆಯನ್ನು ನೀಡಿರುವ ಹಿನ್ನೆಲೆಯಲ್ಲಿ ದಿ: 22.8.2008 ರಿಂದ 26.12.2008ರ ವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯದಲ್ಲಿ ಕಳೆದ ಅವಧಿಯೆಂದು ಆದೇಶಿಸುವಂತೆ ಕೋರಿರುತ್ತಾರೆ.

ಸರ್ಕಾರವು ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಗುಲ್ಬರ್ಗಾ ಇವರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 460 ಎಸ್‌ಜೆಡಿ 2008, ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಗುಲ್ಬರ್ಗಾ ಇವರು ದಿನಾಂಕ 22.8.2008 ರಿಂದ 26.12.2008ರ ವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100(1)ರ ಅನ್ವಯ ಕರ್ತವ್ಯದಲ್ಲಿ ಕಳೆದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1151

**ಆರ್. ನರಸಿಂಹಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ),

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ಪ್ರಾಧ್ಯಾಪಕರು (ನಿವೃತ್ತ), ಅನಾಟಮಿ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ವಿರುದ್ಧ ಶಿಸ್ತುಕ್ರಮ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ :**

1. ಪತ್ರ ಸಂಖ್ಯೆ: ಎಸ್‌ಆರ್‌ಓ (3)/22/2001–02, ದಿನಾಂಕ 27.6.2002 ಮತ್ತು 25.11.2002.
2. ಸರ್ಕಾರದ ಪತ್ರ ಸಂಖ್ಯೆ: ಆಕುಕ 202/ಎಂಎಂಸಿ 2002, ದಿನಾಂಕ 29.1.2003.
3. ಪತ್ರ ಸಂಖ್ಯೆ ಎಸ್‌ಆರ್‌ಓ (3)22/2001–02, ದಿನಾಂಕ 28.4.2003.
4. ಸರ್ಕಾರಿ ಆದೇಶ ಸಂಖ್ಯೆ: ಆಕುಕ 202 ಎಂಎಂಸಿ 2002, ದಿನಾಂಕ 2.1.2004.
5. ಸರ್ಕಾರದ ನೋಟೀಸ್ ಸಂಖ್ಯೆ: ಆಕುಕ 202 ಎಂಎಂಸಿ 2002, ದಿನಾಂಕ 2.1.2004.
6. ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ಪ್ರಾಧ್ಯಾಪಕರು (ನಿವೃತ್ತ) ಅಂಗರಚನಾಶಾಸ್ತ್ರ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು, ಇವರ ಹೇಳಿಕೆ ದಿನಾಂಕ 17.1.2004.
7. ಸರ್ಕಾರಿ ಆದೇಶ ಸಂಖ್ಯೆ: ಆಕುಕ 202 ಎಂಎಂಸಿ 2002, ದಿನಾಂಕ 21.2.2004.
8. ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿ ದಿನಾಂಕ 12.8.2004.
9. ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆಕುಕ 194 ಎಂಎಂಸಿ 2004, ದಿನಾಂಕ 20.10.2004.
10. ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು ಇವರ ಹೇಳಿಕೆ ದಿನಾಂಕ 2.12.2004.
11. ಪತ್ರ ಸಂಖ್ಯೆ: ಆಕುಕ 194 ಎಂಎಂಸಿ 2004, ದಿನಾಂಕ 3.2.2006.
12. ಸಂಖ್ಯೆ: ಪಿಎಸ್‌ಸಿ 195 ಸಿಎಸ್‌ಎಸ್ 05, ದಿನಾಂಕ 16.11.2007.
13. ಸರ್ಕಾರದ ಪತ್ರ ಸಂಖ್ಯೆ: ಆಕುಕ 194 ಎಂಎಂಸಿ 2004, ದಿನಾಂಕ 15.9.2008.
14. ಡಾ: ಕೆ.ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು ಇವರ ಹೇಳಿಕೆ ದಿನಾಂಕ 26.9.2008.

**ಪ್ರಸ್ತಾವನೆ :**

ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ಪ್ರಾಧ್ಯಾಪಕರು, ಅನಾಟಮಿ ವಿಭಾಗ ಇವರು ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯದಿಂದ ಮೈಸೂರು ವೈದ್ಯಕೀಯ ಮಹಾವಿದ್ಯಾಲಯಕ್ಕೆ ವರ್ಗಾವಣೆಗೊಂಡು ದಿನಾಂಕ 19.8.2000ರ ಅಪರಾಹ್ನ ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿನ ಕರ್ತವ್ಯದಿಂದ ಬಿಡುಗಡೆ ಹೊಂದಿ ದಿನಾಂಕ 12.3.2001ರ ಪೂರ್ವಾಹ್ನ ಸರ್ಕಾರಿ ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು ಇಲ್ಲಿ ಕರ್ತವ್ಯಕ್ಕೆ ಹಾಜರಾಗಿದ್ದು, ಅವರು ದಿನಾಂಕ 1.10.2001ರಲ್ಲಿ ಕೋರಿಕೆ ಸಲ್ಲಿಸಿ, ವಯೋವೃದ್ಧ ತಾಯಿಯವರ ತೀವ್ರ ಅನಾರೋಗ್ಯದಿಂದಾಗಿ ಸಕಾಲದಲ್ಲಿ ಮೈಸೂರು ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗದ ಕಾರಣ ಈ ಅವಧಿಯನ್ನು ರಜೆಯೆಂದು ಸಕ್ರಮಗೊಳಿಸಲು ಕೋರಿರುವುದಾಗಿ ತಿಳಿಸಿದ್ದರು.

ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ಪ್ರಾಧ್ಯಾಪಕರು, ಅನಾಟಮಿ ವಿಭಾಗ ಇವರ ವಿರುದ್ಧ ಅನಧಿಕೃತ ಗೈರುಹಾಜರಿಗಾಗಿ ಇಲಾಖಾ ವಿಚಾರಣೆ ನಡೆಸಲು ಕರಡು ದೋಷಾರೋಪಣೆ ಪಟ್ಟಿ ಸಲ್ಲಿಸುವಂತೆ ವೈದ್ಯಕೀಯ ಶಿಕ್ಷಣ ನಿರ್ದೇಶಕರನ್ನು ಕೋರಲಾಗಿತ್ತು.

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ (3)ರಲ್ಲಿ ಓದಲಾದ ತಮ್ಮ ಪತ್ರದೊಂದಿಗೆ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ಪ್ರಾಧ್ಯಾಪಕರು ಇವರ ವಿರುದ್ಧ ಅನಧಿಕೃತ ಗೈರುಹಾಜರಿ ಕುರಿತು ವಿಚಾರಣೆ ನಡೆಸಲು ಕರಡು ದೋಷಾರೋಪಣೆ ಪಟ್ಟಿಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಿದ್ದರು.

ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಡಿ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು, ಇವರ ವಿರುದ್ಧ ಅನಧಿಕೃತ ಗೈರುಹಾಜರಿ ಬಗ್ಗೆ ಇಲಾಖಾ ನಡವಳಿಯನ್ನು ಹೂಡಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಅನುಬಂಧ–1–4ರ ವರೆಗಿನ ದೋಷಾರೋಪಣ ಪಟ್ಟಿಯನ್ನು ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರವರಿಗೆ ಹೊರಡಿಸಿ ಆ ಬಗ್ಗೆ ಅವರ ಲಿಖಿತ ಪ್ರತಿಪಾದನಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು

ಆಪಾದಿತ ಸರ್ಕಾರಿ ಅಧಿಕಾರಿಯಾದ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು ಮೇಲೆ (6)ರಲ್ಲಿ ಓದಲಾದ ತಮ್ಮ ಲಿಖಿತ ಪ್ರತಿಪಾದನಾ ಹೇಳಿಕೆಯಲ್ಲಿ ಅವರ ವಿರುದ್ಧದ ಆರೋಪಗಳನ್ನು ಅಲ್ಲಗಳೆಯುತ್ತಾ, ತಮ್ಮನ್ನು ದೋಷಮುಕ್ತರನ್ನಾಗಿ ಮಾಡುವಂತೆ ಕೋರಿದ್ದರು.

ಮೇಲೆ (7)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಪಾದಿತ ಸರ್ಕಾರಿ ಅಧಿಕಾರಿಯಾದ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು, ಇವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಶ್ರೀ ಟಿ.ಎಸ್. ಪಾಲನೇತ್ರ, ಜಿಲ್ಲಾ ನ್ಯಾಯಾಧೀಶರು (ನಿವೃತ್ತ) ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ಮುಖ್ಯ ಆಡಳಿತಾಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯಾದ ಶ್ರೀ ಟಿ.ಎಸ್. ಪಾಲನೇತ್ರ, ಜಿಲ್ಲಾ ನ್ಯಾಯಾಧೀಶರು (ನಿವೃತ್ತ) ರವರು ಮೇಲೆ (8)ರಲ್ಲಿ ಓದಲಾದ ತಮ್ಮ ಪತ್ರದೊಂದಿಗೆ ಆಪಾದಿತ ಸರ್ಕಾರಿ ಅಧಿಕಾರಿಯಾದ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು ಇವರ ವಿರುದ್ಧ ಅನಧಿಕೃತ ಗೈರುಹಾಜರಿ ಆರೋಪಗಳ ಬಗೆಗಿನ ವಿಚಾರಣಾ ವರದಿಯನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸಿದ್ದರು.

ಮೇಲೆ (9)ರಲ್ಲಿ ಓದಲಾದ ಎರಡನೇ ಕಾರಣ ಕೇಳುವ ನೋಟೀಸಿನೊಂದಿಗೆ ವಿಚಾರಣಾಧಿಕಾರಿಗಳ ವರದಿಯ ಪ್ರತಿಯನ್ನು ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು ಇವರಿಗೆ ಹೊರಡಿಸಿ ಆ ಬಗ್ಗೆ ಅವರ ಅಹವಾಲುಗಳೇನಾದರೂ ಇದ್ದಲ್ಲಿ ಲಿಖಿತ ರೂಪದಲ್ಲಿ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಆಪಾದಿತ ಸರ್ಕಾರಿ ಅಧಿಕಾರಿಯಾದ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು ಇವರು ಮೇಲೆ (10)ರಲ್ಲಿ ಓದಲಾದ ತಮ್ಮ ಲಿಖಿತ ಹೇಳಿಕೆಯಲ್ಲಿ, ಸರ್ಕಾರದ ದಿನಾಂಕ 19.8.2000ದ ಆದೇಶದಂತೆ ವರ್ಗಾವಣೆ ಮಾಡಲಾದ ಸ್ಥಳಕ್ಕೆ ಸಮಯಕ್ಕೆ ಸರಿಯಾಗಿ ಹಾಜರಾಗಲು ಅವರ ತಾಯಿ ಅನಾರೋಗ್ಯ ಕಾರಣವಾಗಿತ್ತೆಂದು 204 ದಿನಗಳ ಗೈರುಹಾಜರಿ ಬಗ್ಗೆ ರಜಾ ಮಂಜೂರು ಮಾಡಲು ಸಲ್ಲಿಸಿದ್ದ ಅರ್ಜಿಯನ್ನು ಇವರ ನಿವೃತ್ತಿಯ ನಂತರ ಅನಧಿಕೃತ ಗೈರುಹಾಜರಿಯೆಂದು ಪರಿಗಣಿಸುತ್ತಿರುವುದು, ನಾಲ್ಕು ತಿಂಗಳ ಅವಧಿಗೆ ಮೀರಿ ಕರ್ತವ್ಯದಿಂದ ಗೈರುಹಾಜರಾದಲ್ಲಿ ಸೇವೆಯಿಂದ ತೆಗೆದು ಹಾಕುವ ಅಥವಾ ವಜಾ ಮಾಡುವ ದಂಡನೆ ವಿಧಿಸಬಹುದಾಗಿದೆ ಎಂಬುದು ಸರ್ವೋಚ್ಚ ನ್ಯಾಯಾಲಯದ ತೀರ್ಪಿನಂತೆ ಅಸಿಂಧುವೆಂದೂ, ನಿವೃತ್ತಿಯ ನಂತರ ನಿಯಮ 214ರಂತೆ ಇಲಾಖಾ ವಿಚಾರಣೆಗೆ ಸಂಬಂಧಿಸಿದ ಆರೋಪವೇ 'Infoutous'

ಆಗುವುದೆಂದೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಇವರ ಅರ್ಜಿ ಸಂಖ್ಯೆ: 1237/2000 ದಿನಾಂಕ 13.2.2001ರ ಆದೇಶದಲ್ಲಿ ಇವರು ಮನವಿ ಸಲ್ಲಿಸಿರುವುದನ್ನು ಪರಿಶೀಲಿಸಿ, ತೀರ್ಮಾನ ತೆಗೆದುಕೊಳ್ಳಲು ಆದೇಶಿಸಿದ್ದಾಗ್ಯೂ ನಿವೃತ್ತನಾದ ನಂತರ ಅನಧಿಕೃತ ಗೈರುಹಾಜರಿ ಆರೋಪ ಹೊರಡಿಸಿ, ನಿಯಮ 214ರಡಿ ಇಲಾಖಾ ವಿಚಾರಣೆ ನಡೆಸಿರುವುದನ್ನು ಪ್ರಸ್ತಾಪಿಸಿ ಇವರನ್ನು ಆರೋಪಣೆಗಳಿಂದ ಮುಕ್ತರನ್ನಾಗಿಸಬೇಕೆಂದು ಕೋರಿದ್ದರು.

ಮೇಲೆ (11)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 214ರಡಿ ಸದರಿ ದುರ್ನಡತೆಗಾಗಿ ಅವರ ಪಿಂಚಣಿಯಲ್ಲಿ ಶೇಕಡಾ 10ರಷ್ಟನ್ನು ಒಂದು ವರ್ಷದ ಅವಧಿಗೆ ಕಡಿತಗೊಳಿಸುವ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಕರ್ನಾಟಕ ಲೋಕಸೇವಾ ಆಯೋಗವು ಮೇಲೆ (12)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಆಪಾದಿತ ಅಧಿಕಾರಿಯಾದ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು ಇವರ ಪೂರ್ಣ ಪಿಂಚಣಿಯನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ಸಹಮತಿ ನೀಡಿತ್ತು.

ಮೇಲೆ (13)ರಲ್ಲಿ ಓದಲಾದ ಸರ್ಕಾರದ ತಮ್ಮ ಪತ್ರದಲ್ಲಿ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು ಇವರ ನಿವೃತ್ತಿ ವೇತನವನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸುವ ಬಗ್ಗೆ ಅವರ ಅಹವಾಲನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಡಾ: ಹೆಚ್.ಬಿ. ಪ್ರಕಾಶ್ ಕುಮಾರ್‌ರವರು ಮೇಲೆ (14)ರಲ್ಲಿ ಓದಲಾದ ಲಿಖಿತ ಹೇಳಿಕೆಯನ್ನು ಸಲ್ಲಿಸಿ, ಈ ರೀತಿ ತೀವ್ರತರವಾದ ದಂಡನೆ ವಿಧಿಸಿದರೆ ನ್ಯಾಯಾಲಯದಲ್ಲಿ ಪ್ರಶ್ನಿಸುವುದಾಗಿ ತಿಳಿಸಿ, ಇಳಿವಯಸ್ಸಿನಲ್ಲಿ ಮಾನಸಿಕ ನೆಮ್ಮದಿಯಿಂದ ಬದುಕಲು ತನ್ನ ಮೇಲಿನ ಶಿಸ್ತು ಕ್ರಮವನ್ನು ಕೈಬಿಟ್ಟು ಆರೋಪಮುಕ್ತರನ್ನಾಗಿ ಘೋಷಿಸಲು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಆಪಾದಿತ ಸರ್ಕಾರಿ ಅಧಿಕಾರಿಯಾದ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು ಇವರ ವಿರುದ್ಧದ ಆರೋಪದ ಬಗ್ಗೆ ವಿಚಾರಣಾಧಿಕಾರಿಯ ಕಂಡುಕೊಳ್ಳುವಿಕೆಯನ್ನು ಒಪ್ಪಿಕೊಂಡು, ಇವರ ನಿವೃತ್ತಿ ವೇತನದಲ್ಲಿ ಶೇ. 10ರಷ್ಟನ್ನು ಒಂದು ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 194 ಎಂಎಂಪಿ 2004, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2009**

ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214ರ ಪ್ರಕಾರ ಆಪಾದಿತ ಸರ್ಕಾರಿ ಅಧಿಕಾರಿಯಾದ ಡಾ: ಹೆಚ್.ಬಿ. ಪ್ರಕಾಶ್ ಕುಮಾರ್, ನಿವೃತ್ತ ಪ್ರಾಧ್ಯಾಪಕರು, ಅಂಗರಚನಾ ಶಾಸ್ತ್ರ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು ಇವರ ನಿವೃತ್ತಿ ವೇತನದಲ್ಲಿ ಶೇಕಡ 10ರಷ್ಟನ್ನು ಒಂದು ವರ್ಷದ ಅವಧಿಗೆ ಮಾತ್ರ ಕಡಿತಗೊಳಿಸುವ ದಂಡನೆಯನ್ನು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1146

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## FOREST, ECOLOGY AND ENVIRONMENT SECRETARIAT

**Sub :** Transfer of lease of diversion of 27.193 ha. of forest land in Alagilwada RP of Harapanahalli Range, Davangere Division for establishment of 23.10 MW Wind Power Project sanctioned in favour of M/s Bellary Wind Power Private Ltd., to M/s B.P. Energy India Pvt. Ltd., Mumbai.

**Read :**
1. Letter No.4-KRC 497/2008/BAN/3144, dated 24th October 2008 of Government of India, Ministry of Environment and Forests, Regional Office, Bangalore.
2. Government Order No. FEE 96 FLL 2008, Bangalore, dated 10.11.2008.
3. Guidelines of G.O.I. F. No. 8-84/2002-FC, dated 14.5.2004 and 20.2.2006.
4. Letter No. A5(5)GFL.CR.3/07-08, dated 4.2.2009 of Principal Chief Conservator of Forests, Bangalore.
5. State Government letter No. FEE 16 FLL 2009, dated 13.2.2009.
6. Letter No. 4-KRC 497/2008-BAN/3946, dated 11.3.2009 of Government of India, Ministry of Environment and Forests, Regional Office, Bangalore.

**Preamble:**

Government of India in its letter read at (1) above has accorded approval under Forest (Conservation) Act, 1980 for diversion of 27.193 ha. Forest land in Alagilwada RF in Davangere Division for establishment of 23.10 MW Wind Power Project in favour of M/s Bellary Wind Power Private Ltd., Bangalore Accordingly Government of Karnataka has issued Government Order read at (2) above.

The Principal Chief Conservator of Forests, Bangalore vide his letter dated 4.2.2009 read at (4) above had submitted a proposal to obtain the approval of Government of India as per the Government of India's guidelines dated 14.5.2004 and 20.2.2006 (read at 3 above) issued under Forest (Conservation) Act, 1980 for transfer of lease for diversion of 27.193 ha. of forest land in Alagilwada Reserve Forest of Harapanahalli Range, Davangere Division for establishment of 23.10 MW of Wind Power Project sanctioned in favour of M/s Bellary Wind Power Private Limited to M/s BP Energy India Pvt. Ltd., Mumbai.

The original user agency, M/s Bellary Wind Power Private Ltd., Bangalore has proposed to transfer 27.193 ha. of forest land to the new user agency M/s B.P. Energy India Private Limited, Mumbai. The original user agency has submitted no objection certificate for such transfer and the new user agencies have submitted an under taking that they will abide by the conditions stipulated by Government of India and Government of Karnataka.

Accordingly the proposel was recommended to Government of India vide State Government letter dated 13.2.2009 read at (5) above.

Government of India, Ministry of Environment and Forests, Regional Office, Bangalore vide their letter dated 11th March 2009 read at (6) above has conveyed its approval guidelines issued under Forest (Conservation) Act, 1980 for transfer of lease of diverted forest land of 27.193 ha. in Alagilwada RF of Harapanahalli Range, Davangere Division for establishment of 23.10 MW Power Project from M/s Bellary Wind Power Private Limited, Bangalore (the original user agency) to M/s B.P. Energy India Private Limited, Mumbai (the Investor/Power Producer) subject to the condition that M/s B.P. Energy India Private Limited, Mumbai shall abide by all the conditions imposed by Central Government vide their letter dated 24.10.2008 and any other conditions that may be stipulated by Government of India in future read at (1) above.

The proposal has been examined in detail and hence the order.

**Government Order No. FEE 16 FLL 2009, Bangalore, Dated 4th April 2009**

In the circumstances explained above, Government are pleased to accord approval guidelines issued under Section 2 of Forest (Conservation) Act, 1980 for transfer of lease of diverted forest land of 27.193 ha. in Alagilwada RF of Harapanahalli Range, Davangere Division for establishment of 23.10 MW Wind Power Project from M/s Bellary Wind Power Private Limited Bangalore, (the original User agency), to M/s B.P. Energy India Private Limited, Mumbai (the Investor/Power Producer).

The transfer of lease is subject to the condition that the new User agencies, i.e., the investors/ power producer, shall abide all the conditions imposed by the Central Government/ State Government/ Principal Chief Conservator of Forests, for diversion of 27.193 ha. of forest land in favour of M/s B.P. Energy India Private Limited, Mumbai for establishment of 23.10 MW Wind Power Project in Alagilwada RF of Harapanahally Range, Davangere Division of Karnataka.

By order and in the name of the Governor of Karnataka,

PR. 1143

**H.M. MALLIKARJUNA SWAMY**

Under Secretary to Government,

Forest, Ecology and Environment Department.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಎಂ.ಸಿ. ಕೋರನಮಠ, ತಜ್ಞ ವೈದ್ಯರು ಸಾರ್ವಜನಿಕ ಆಸ್ಪತ್ರೆ, ಸೊಂಡೂರು, ಬಳ್ಳಾರಿ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ವಿರುದ್ಧ ಶಿಸ್ತುಕ್ರಮ – ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ :**

1. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಜಿ (2)/26/2003–04, ದಿನಾಂಕ 18.7.2003.
2. ಡಾ:. ಎಂ.ಸಿ. ಕೋರನಮಠ, ತಜ್ಞ ವೈದ್ಯರು ರವರ ರಕ್ಷಣಾ ಹೇಳಿಕೆ ದಿನಾಂಕ 11.8.2003.
3. ಆಯುಕ್ತರು, ಆಕುಕ, ಸೇವೆಗಳು, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಪಿಜಿ (2)/26/ 2003–04, ದಿನಾಂಕ 19.2.2004.
4. ವಿಚಾರಣಾಧಿಕಾರಿಗಳು ಹಾಗೂ ಉಪ ನಿರ್ದೇಶಕರು, ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ: ಸಾಆಸಂ/ಉನಿ/ಸಿ/70/ವಿಚಾರಣೆ/1/2004–05, ದಿನಾಂಕ 24.8.2004.
5. ಪತ್ರ ಸಂಖ್ಯೆ: ಡಿಪಿಜಿ (2)/26/2003–04, ದಿನಾಂಕ 8.9.2004.
6. ಡಾ: ಎಂ.ಸಿ. ಕೋರನಮಠ, ತಜ್ಞ ವೈದ್ಯರು ರವರ ರಕ್ಷಣಾ ಹೇಳಿಕೆ ದಿನಾಂಕ 17.9.2004.
7. ಪತ್ರ ಸಂಖ್ಯೆ: ಡಿಪಿಜಿ (2)/26/ 2003–04, ದಿನಾಂಕ 15.1.2005.
8. ಸರ್ಕಾರದ ಪತ್ರ ಸಂಖ್ಯೆ: ಆಕುಕ 32 ಎಂಎಸ್ಎ 2005, ದಿನಾಂಕ 23.3.2005.
9. ಆಯುಕ್ತರು, ಆಕುಕ, ಸೇವೆಗಳು, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಪಿಜಿ (2)/26/ 2003–04, ದಿನಾಂಕ 30.7.2007.
10. ವಿಚಾರಣಾ ವರದಿ ಸಂಖ್ಯೆ: ಮುಜಾಅ/ಜಾಕೋ/16/2007–08, ದಿನಾಂಕ 7.3.2008.
11. ಆಯುಕ್ತರು, ಆಕುಕ, ಸೇವೆಗಳು, ಬೆಂಗಳೂರು ಇವರ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ (2) ಬೆಂವಿ/ವಿ/17/2006–07, ದಿನಾಂಕ 12.5.2008.
12. ಪತ್ರ ಸಂಖ್ಯೆ: ಡಿಪಿಜಿ (2) ಬೆಂವಿ/ವಿ/17/2003–04, ದಿನಾಂಕ 16.10.2008.

**ಪ್ರಸ್ತಾವನೆ :**

ಡಾ: ಎಂ.ಸಿ. ಕೋರನಮಠ, ತಜ್ಞ ವೈದ್ಯರು, ಸಾರ್ವಜನಿಕ ಆಸ್ಪತ್ರೆ, ಅಥಣಿ, ಬೆಳಗಾವಿ ಜಿಲ್ಲೆ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ 01.8.2001ರಿಂದ ದಿನಾಂಕ 30.8.2001ರ ವರೆಗೆ ರಜೆಯ ಮೇಲೆ ತೆರಳಿ, ರಜೆ ಮುಗಿದ ನಂತರ ಸೇವೆಗೆ ಹಾಜರಾಗದೆ ರಜೆಯನ್ನು ಪದೇ ಪದೇ ವಿಸ್ತರಿಸಿ, ರಜೆ ಮಂಜೂರಾಗದಿದ್ದರೂ ಸಹ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿ ಆದ ಆರೋಪದ ಬಗ್ಗೆ ಮೇಲೆ (1)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ಜಾರಿ ಮಾಡಿದ್ದರು.

ಡಾ: ಎಂ.ಸಿ. ಕೋರನಮಠ ರವರು ದಿನಾಂಕ 18.7.2003ರ ಆಯುಕ್ತರ ಷೋಕಾಸ್ ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ಪತ್ರದ ಮೂಲಕ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು, ಅವರ ಮೇಲೆ ಮಾಡಲಾದ ಆರೋಪಗಳನ್ನು ನಿರಾಕರಿಸಿದ್ದಾರೆ. ಈ ರಕ್ಷಣಾ ಹೇಳಿಕೆಯಲ್ಲಿ ಅವರು ನೀಡಿದ ಕಾರಣಗಳು ತೃಪ್ತಿಕರವಾಗಿಲ್ಲದ ಕಾರಣ, ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರು ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ನಿರ್ಧರಿಸಿ ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಉಪ ನಿರ್ದೇಶಕರು (ಪಿ.ಹೆಚ್.ಐ.) ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ, ಪತ್ರಾಂಕಿತ ಸಹಾಯಕರು, ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳ ಕಛೇರಿ, ಬೆಳಗಾವಿ ರವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿದ್ದರು.

ವಿಚಾರಣಾಧಿಕಾರಿಗಳು ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರಿಗೆ ಸಲ್ಲಿಸಿದ್ದರು. ವಿಚಾರಣಾ ವರದಿಯಲ್ಲಿ ಆಪಾದಿತರ ವಿರುದ್ಧ ಮಾಡಲಾದ ಆರೋಪಗಳಲ್ಲಿ ಅನಧಿಕೃತ ಗೈರುಹಾಜರಿಯ ಆರೋಪವು ನಿಸ್ಸಂಶಯವಾಗಿ ಸಾಬೀತಾಗಿದೆ ಎಂದು ವರದಿಯನ್ನು ನೀಡಿದ್ದರು.

ಸದರಿ ಅಧಿಕಾರಿಯ ವಿರುದ್ಧ ಆರೋಪ ಸಾಬೀತಾಗಿದ್ದ ಕಾರಣ, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾ ವರದಿಯೊಂದಿಗೆ ತಿಳುವಳಿಕೆ ಪತ್ರದ ಮೂಲಕ ಆರೋಪಿತ

ವೈದ್ಯಾಧಿಕಾರಿಗಳಿಗೆ ಜಾರಿ ಮಾಡಿ, ಈ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ವಿವರಣೆಯನ್ನು ಕೋರಿದ್ದರು. ಡಾ: ಎಂ.ಸಿ. ಕೋರನಮಠ ರವರು ಮೇಲೆ (6)ರಲ್ಲಿ ಓದಲಾದ ಪತ್ರದಲ್ಲಿ ರಕ್ಷಣಾ ಹೇಳಿಕೆ ಸಲ್ಲಿಸಿದ್ದು, ಅವರು ನೀಡಿದ ಕಾರಣಗಳು ತೃಪ್ತಿಕರವಾಗಿಲ್ಲದ ಕಾರಣ, ವಿಚಾರಣಾ ವರದಿಯಲ್ಲಿ ದಿನಾಂಕ 1.8.2001 ರಿಂದ 4.3.2004ರ ವರೆಗಿನ ಗೈರುಹಾಜರಿಯು ವಿಚಾರಣಾ ವರದಿಯಿಂದ ಸಾಬೀತಾಗಿದ್ದರಿಂದ, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಮೇಲೆ (7)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಅಧಿಕಾರಿಯು ದೀರ್ಘಕಾಲ ಅನಧಿಕೃತ ಗೈರುಹಾಜರಾದ ಕಾರಣ ಕಠಿಣ ದಂಡನೆ ವಿಧಿಸುವ ಬಗ್ಗೆ ನಿರ್ಣಯ ಕೈಗೊಳ್ಳುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಸರ್ಕಾರವು ಆಯುಕ್ತರ ದಿನಾಂಕ 15.1.2005ರ ಪ್ರಸ್ತಾವನೆ, ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ದಾಖಲೆಗಳು ಮತ್ತು ಆರೋಪಿತರ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಿ, ಡಾ: ಎಂ.ಸಿ. ಕೋರನಮಠ ಅವರು ತಮ್ಮ ರಕ್ಷಣಾ ಹೇಳಿಕೆಯಲ್ಲಿ ಅನಧಿಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ತಾವು ಅನಧಿಕೃತ ಗೈರುಹಾಜರಾಗಿಲ್ಲವೆಂದು, ಅದನ್ನು ಸಮರ್ಥಿಸಲು ವೈದ್ಯಕೀಯ ಆಧಾರದ ಮೇಲೆ ರಜೆ ಸಲ್ಲಿಸಿರುವುದಾಗಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ನೀಡಿದ್ದು, ರಜೆ ಹಾಕಲು ತಮ್ಮ ಕೆಲವೊಂದು ವೈಯಕ್ತಿಕ ಸಮಸ್ಯೆಗಳಿಂದ ಅಂದರೆ ಸ್ವಾಭಿಮಾನ ನಿಷ್ಠೆಗೆ ಧಕ್ಕೆಯಾಗಿರುವುದರಿಂದ ಮಾನಸಿಕ ಒತ್ತಡದಿಂದಾಗಿ ಕೆಲಸದಲ್ಲಿ ತುಂಬಾ ತೊಂದರೆಯಾಗುತ್ತಿದ್ದು ಪದೇ ಪದೇ ರಜೆ ವಿಸ್ತರಿಸಲಾಗುತ್ತಿತ್ತೆಂದು, ಹೇಳಿಕೆ ಸಲ್ಲಿಸಿದ್ದು, ಈ ಅಂಶವನ್ನು ಸರ್ಕಾರವು ಪರಿಶೀಲಿಸಿ, ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ವಿವರಣೆ ಇಲ್ಲದೆ ಇದ್ದ ಕಾರಣ ಹಾಗೂ ಸಾಕ್ಷಿಯನ್ನು ಕೂಡಾ ವಿಚಾರಣಾ ಸಮಯದಲ್ಲಿ ಪರಿಶೀಲಿಸದೆ ಇರುವುದು ಕಂಡು ಬಂದಿದ್ದು, ವಿಚಾರಣಾ ವರದಿಯಲ್ಲಿ ಅನಧಿಕೃತ ಗೈರುಹಾಜರಿ ಸಾಬೀತಾಗಿದೆ ಎಂಬ ಬಗ್ಗೆ ತರ್ಕಬದ್ಧವಾದ ವಿವರಣೆ ಇಲ್ಲದೆ ಇದ್ದ ಕಾರಣ, ಈ ಬಗ್ಗೆ ನಿಯಮಾನುಸಾರ ವಿಚಾರಣೆ ನಡೆಸಿ, ಯಾವ ಸಂಶಯಕ್ಕೆ ಆಸ್ಪದ ನೀಡದೆ ಮರು ವಿಚಾರಣೆ ನಡೆಸುವಂತೆ ಮೇಲೆ (8)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವು ನಿರ್ದೇಶನ ನೀಡಿದೆ.

ದಿನಾಂಕ 23.3.2005ರ ಸರ್ಕಾರದ ಪತ್ರದ ನಿರ್ದೇಶನದನ್ವಯ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ಈ ಪ್ರಕರಣದ ಬಗ್ಗೆ ಮರು ವಿಚಾರಣೆ ನಡೆಸಲು ಮೇಲೆ (9)ರಲ್ಲಿ ಓದಲಾದ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿ, (ಜಾಗೃತ ಕೋಶ) ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶನ ನೀಡಿದ್ದರು.

ವಿಚಾರಣಾಧಿಕಾರಿಗಳು ಪ್ರಕರಣಕ್ಕೆ ಸಂಬಂಧಿಸಿದಂತೆ, ನಿಯಮಾನುಸಾರ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಮೇಲೆ (10)ರಲ್ಲಿ ಓದಲಾದ ಪತ್ರದಲ್ಲಿ ಸಲ್ಲಿಸಿದ್ದಾರೆ. ವಿಚಾರಣಾ ವರದಿಯಲ್ಲಿ ಸದರಿ ವೈದ್ಯಾಧಿಕಾರಿಗಳ ವಿರುದ್ಧ ಮಾಡಲಾದ ಅನಧಿಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ಸದರಿ ವೈದ್ಯಾಧಿಕಾರಿಯವರು ದಿನಾಂಕ 01.8.2001 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರುಹಾಜರಾಗಿರುವುದು ಸಾಬೀತಾಗಿದೆ ಎಂದು ವರದಿ ನೀಡಿದ್ದಾರೆ.

ಸದರಿ ಅಧಿಕಾರಿಯ ವಿರುದ್ಧದ ಆರೋಪವು ಸಾಬೀತಾಗಿದ್ದ ಕಾರಣ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ಮೇಲೆ (11)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾ ವರದಿಯೊಂದಿಗೆ ತಿಳುವಳಿಕೆ ಪತ್ರದ ಮೂಲಕ ಆರೋಪಿತ ವೈದ್ಯಾಧಿಕಾರಿಗೆ ಜಾರಿ ಮಾಡಿ ಈ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದು ಎಂಬುದರ ಬಗ್ಗೆ ಪತ್ರ ತಲುಪಿದ 15 ದಿನಗಳ ಒಳಗೆ ಲಿಖಿತ ಮೂಲಕ ಹೇಳಿಕೆಯನ್ನು ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಸದರಿ ವೈದ್ಯಾಧಿಕಾರಿಯವರು ದಿನಾಂಕ 12.5.2008ರ ತಿಳುವಳಿಕೆ ಪತ್ರಕ್ಕೆ ನಿಗದಿತ ಅವಧಿಯಲ್ಲಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿಲ್ಲದ ಕಾರಣ, ಮೇಲೆ (12)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ, ವರದಿ ಸಲ್ಲಿಸಿದ್ದು, ಸದರಿ ವಿಚಾರಣಾ ವರದಿಯಲ್ಲಿ ಆಪಾದಿತ ವೈದ್ಯರ ಮೇಲಿನ ಅನಧಿಕೃತ ಗೈರುಹಾಜರಿ ಆರೋಪವು ನಿಸ್ಸಂಶಯವಾಗಿ ರುಜುವಾತು ಆಗಿರುವುದರಿಂದ, ಸದರಿ ವೈದ್ಯಾಧಿಕಾರಿಗೆ ಕಠಿಣ ದಂಡನೆಯನ್ನು ವಿಧಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ವಿಚಾರಣಾ ವರದಿ, ಸಂಬಂಧಿಸಿರುವ ದಾಖಲಾತಿಗಳನ್ನು ಆಯುಕ್ತರ ಪ್ರಸ್ತಾವನೆಯನ್ನು ಕೂಲಕಂಷವಾಗಿ ಪರಿಶೀಲಿಸಿದೆ. ಡಾ: ಎಂ.ಸಿ. ಕೋರನಮಠ ಅವರು ದಿನಾಂಕ 1.8.2001 ರಿಂದ ಅನಧಿಕೃತ ಗೈರುಹಾಜರಾಗಿರುವುದು ಇಲಾಖಾ ವಿಚಾರಣೆಯಿಂದ ದೃಢಪಟ್ಟಿರುವುದನ್ನು ಗಂಭೀರವಾಗಿ ಪರಿಗಣಿಸಿ, ಸದರಿ ವೈದ್ಯರನ್ನು ಸರ್ಕಾರಿ ಸೇವೆಯಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ-8(VIII) ರಡಿಯಲ್ಲಿ ವಜಾಗೊಳಿಸುವ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 425 ಎಂಎಸ್‌ಎ 2008, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಸರ್ಕಾರವು, ಡಾ: ಎಂ.ಸಿ. ಕೋರನಮಠ, ತಜ್ಞರು, ಸಾರ್ವಜನಿಕ ಆಸ್ಪತ್ರೆ, ಸೊಂಡೂರು, ಬಳ್ಳಾರಿ ಜಿಲ್ಲೆ ಇವರು ದಿನಾಂಕ 1.8.2001 ರಿಂದ ಇದುವರೆವಿಗೂ ಸೇವೆಗೆ ಅನಧಿಕೃತ

ಗೈರುಹಾಜರಾಗಿರುವುದು ಆರೋಪವು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ, ನಿಯಮ–8(VIII) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 609

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## FOREST, ECOLOGY AND ENVIRONMENT SECRETARIAT

**Sub :** Grant of permission for usage of old existing approach road in respect of mining lease 2236 of M/s Sesa Goa Ltd., over an extent of 3.25 ha. of forest land in Nirthadi Reserve Forest, Holalkere Range of Chitradurga Division.

**Read :**
1. Letter No. A5(1) MNG.CR.27/08-09, dated 31.7.2008 of the Principal Chief Conservator of Forests, Bangalore.
2. State Government Order No. FEE 77 FFM 2006, dated 9.10.2006.
3. Government of India guidelines No. 11-8/2001-FC, dated 15.11.2001.

**Preamble:**

The State Government vide Order read at (2) above, have accorded approval for extension period of diversion of forest land w.e.f. 11.7.06 up to 27.10.2012 for mining over an area of 163.5 ha. in Neerthadi Reserved Forest, Holalkere Range, Chitradurga Forest Division and approval was also accorded for transfer of mining lease to M/s Sesa Goa Limited, subject to certain conditions.

The Principal Chief Conservator of Forests had sent proposal vide his letter dated 31.7.2008 read at (1) above for permission to use the old existing approach road in respect of mining lease No. 2236 of M/s Sesa Goa Limited over an extent of 3.25 ha. of forest land in Nirthadi Reserve Forest, Holalkere Range, Chitradurga Division in the light of the guidelines issued by the Government of India in their letter No. 11-8/FC, dated 15.11.2007 subject to certain conditions.

After careful consideration of the proposal, State Government vide Government of India guidelines read at (3) above has considered according permission to use the old existing approach road in respect of mining lease No. 2236 of M/s Sesa Goa Limited, over an extent of 3.25 ha. of forest land in Nirthadi Reserve Forest, Holalkere Range, Chitradurga Division.

The proposal has been examined in detail and hence the order.

**Government Order No. FEE 123 FFM 2008, Bangalore, Dated 6th April 2009**

In the Circumstances explained in the preamble above, Government are pleased to accord permission to use the old existing approach road as per the Government of India guidelines Letter No. 11-8/2001-FC, dated 15.11.2001 in respect of mining lease No. 2236 over an extent of 3.25 ha. of forest land in Nirthadi Reserve Forest, Holalkere Range, Chitradurga Division in favour of M/s Sesa Goa Limited subject to the following conditions.

1. Legal status of forest land shall remain unchanged.
2. No tree felling should be allowed.
3. No widening of road should be undertaken, without permission of the Central Government under the Forest (Conservation) Act, 1980.
4. No breaking of fresh forest land is carried out.
5. The above usage of existing road (3.25 ha.) subject to the payment of Net Present Value and Compensatory afforestation as per existing practices/provisions.

6. This permission is valid till the expiry of mining lease.
7. Any other condition that the State Government/Government of India/Principal Chief Conservator of Forests may impose from time to time in the interest of conservation, protection and development of forests.

By order and in the name of the Governor of Karnataka,

PR. 1142

**H.M. MALLIKARJUNA SWAMY**

Under Secretary to Government,

Forest, Ecology and Environment Department.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ, ಅವರ ಕಚೇರಿಗೆ ಎರಡು ಹೈ ಬ್ಯಾಕ್ ಲೆದರ್ ಚೇರ್‌ಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 830 ಸಅಸೇ 2008, ದಿನಾಂಕ 7.11.2008.

2. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 6 ಡಿಎಸ್ವೈ 2008, ದಿ: 10.10.2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ದಿನಾಂಕ 13.10.2008ರಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ 18400–22400ರಲ್ಲಿ ಕಾರ್ಯದರ್ಶಿಗಳ ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಲೇಖನ ಸಾಮಗ್ರಿಗೆ ರೂ. 40,000ಗಳನ್ನು ಹಾಗೂ ಪೀಠೋಪಕರಣಗಳಿಗೆ ರೂ. 80,000ಗಳನ್ನು ಒದಗಿಸಲಾಗಿದೆ.

ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ತಮ್ಮ ಕಚೇರಿಗೆ ಎರಡು ಹೈ ಬ್ಯಾಕ್ ಲೆದರ್ ಕುರ್ಚಿಗಳನ್ನು ಕಚೇರಿ ಟೇಬಲ್‌ಗೆ ಹಾಗೂ ಆಂತರಿಕ ಸಭೆ ಟೇಬಲ್‌ಗೆ ಒಂದರಂತೆ ಖರೀದಿಸಿ ಅಳವಡಿಸಲು ತಿಳಿಸಿರುತ್ತಾರೆ. ಅದರಂತೆ ಮೂರು ಫರ್ನಿಚರ್ ಕಂಪನಿಗಳಿಂದ ಕೊಟೇಷನ್ (Quotation) ಪಡೆಯಲಾಗಿದೆ. ಸದರಿ ಕೊಟೇಷನ್‌ನಲ್ಲಿ ಹೈ ಬ್ಯಾಕ್ ಲೇದರ್ (3259) ಕುರ್ಚಿಗಳಿಗೆ ಈ ಕೆಳಕಂಡ ಬೆಲೆಯನ್ನು ನೀಡಿರುತ್ತದೆ.

| ಕ್ರಮ ಸಂಖ್ಯೆ | ಕಂಪನಿಯ ಹೆಸರು | ವಿವರ | ಪ್ರಮಾಣ | ಬೆಲೆ | ಒಟ್ಟು ರೂ.ಗಳಲ್ಲಿ |
|---|---|---|---|---|---|
| 1 | ವುಡ್ ಡೆಕರ್ | ಹೈ ಬ್ಯಾಕ್ ಲೇದರ್ ಚೇರ್ (3259) | 2 | 14500/– VAT@12.5% (3500) | 31,500 |
| 2 | ಸೌರವ್ ಸುಮನ್ ಫೈನ್‌ವೆಸ್ಟ್ ಪ್ರೈವೆಟ್ ಲಿಮಿಟೆಡ್ | ಹೈ ಬ್ಯಾಕ್ ಲೇದರ್ ಚೇರ್ (3259) | 2 | 13500/– VAT@12.5% (3375) | 30,375 |
| 3 | ಡ್ಯೂರೇನ್ | ಹೈ ಬ್ಯಾಕ್ ಲೇದರ್ ಚೇರ್ (3259) | 2 | 12950/– VAT@12.5% (3238) | 29,138 |

ಈ ಮೇಲ್ಕಂಡ ಪೀಠೋಪಕರಣಗಳ ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ, ಅತೀ ಕಡಿಮೆ ದರವನ್ನು ಸೂಚಿಸಿರುವ ಡ್ಯೂರೇನ್ ಕಂಪನಿಯಿಂದ ಎರಡು ಕುರ್ಚಿಗಳನ್ನು ರೂ. 25900 ಮತ್ತು ಶೇಕಡಾ 12.5% ತೆರಿಗೆ ರೂ. 3238ನ್ನು ಸೇರಿಸಿ ಒಟ್ಟು ರೂ. 29138ನ್ನು ನೀಡಿ ಖರೀದಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 159 ಸ್ವೀಮರ 2008, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2008**

ಸರ್ಕಾರದ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಇವರ ಕಚೇರಿಗೆ ಡ್ಯೂರೇನ್ ಕಂಪನಿ ಇವರಿಂದ ಎರಡು ಹೈ ಬ್ಯಾಕ್ ಲೇದರ್ ಚೇರ್ (3259)ಗಳನ್ನು ಒಟ್ಟು ಮೊತ್ತ ರೂ. 29138ಗಳಲ್ಲಿ ಖರೀದಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಈ ವೆಚ್ಚವನ್ನು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್ವೈ 2008, ದಿ: 10.10.2008ರಲ್ಲಿ ತಿಳಿಸಿರುವ ಲೆಕ್ಕಶೀರ್ಷಿಕೆ ಅಡಿಯಲ್ಲಿ ಭರಿಸುವುದು. ಡ್ಯೂರೇನ್ ಕಂಪನಿಗೆ ಮೇಲ್ಕಂಡ ಮೊತ್ತವನ್ನು ಸಿ.ಆ.ಸು.ಇ. ಲೆಕ್ಕಪತ್ರ ಶಾಖೆಯು DC ಬಿಲ್ ಮೂಲಕ ಬಿಡುಗಡೆ ಮಾಡುವುದು.

ಮೇಲ್ಕಂಡ ಡ್ಯೂರೇನ್ ಪೀಠೋಪಕರಣಗಳ ಕಂಪನಿಯು ಸದರಿ ಎರಡು ಕುರ್ಚಿಗಳನ್ನು ಕೂಡಲೇ ಕಾರ್ಯದರ್ಶಿಗಳು ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆಗೆ ಸರಬರಾಜು ಮಾಡುವುದು ಹಾಗೂ ಸಿ.ಆ.ಸು.ಇಲಾಖೆಯಿಂದ ನೀಡುವ ಮೊತ್ತಕ್ಕೆ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 149

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಬೆಂಗಳೂರಿನ ಅರಮನೆ ರಸ್ತೆಯಲ್ಲಿರುವ ಔಷಧ ನಿಯಂತ್ರಣ ಇಲಾಖೆಯ ಕಛೇರಿ ಹಿಂಭಾಗದಲ್ಲಿ ಖಾಲಿಯಿರುವ ನಿವೇಶನ ಸಂಖ್ಯೆ: 3ರಲ್ಲಿ ಸುಮಾರು 81,300 ಚದುರ ಅಡಿ ಜಾಗದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸಹಭಾಗಿತ್ವದೊಂದಿಗೆ ಕಟ್ಟಡ ನಿರ್ಮಾಣ ಮಾಡುವ ಕುರಿತು.

**ಪ್ರಸ್ತಾವನೆ :**

ಬೆಂಗಳೂರಿನ ಅರಮನೆ ರಸ್ತೆಯ ಅಗಲೀಕರಣಕ್ಕಾಗಿ ಔಷಧ ನಿಯಂತ್ರಣ ಇಲಾಖೆಯ ಮುಖ್ಯ ಕಟ್ಟಡದ ಮುಂದೆ ಇದ್ದ ಸುಮಾರು 2,500 ಚದುರ ಅಡಿ ಜಾಗವನ್ನು ಮಹಾನಗರಪಾಲಿಕೆಯು ಸ್ವಾಧೀನಪಡಿಸಿಕೊಂಡಿದೆ. ಹಾಗೂ ಔಷಧ ನಿಯಂತ್ರಣ ಇಲಾಖೆಯಲ್ಲಿ ಅಮಲುಜಾರಿ ವಿಭಾಗವು ಅತ್ಯಂತ ಪ್ರಮುಖವಾಗಿದ್ದು, ಕರ್ನಾಟಕ ರಾಜ್ಯದ ಸುಮಾರು 40ರಷ್ಟು ಔಷಧ ವಿತರಕರು ಬೆಂಗಳೂರಿನ ನಗರ ಮತ್ತು ಗ್ರಾಮಾಂತರ ಪ್ರದೇಶದಲ್ಲಿದ್ದು, ಅದಕ್ಕೆ ಸಂಬಂಧಪಟ್ಟಂತೆ ಸದ್ಯಕ್ಕೆ 07 ವೃತ್ತ ಕಛೇರಿಗಳು, ರಾಜ್ಯ ಗುಪ್ತವಾರ್ತೆ ವಿಭಾಗ ಹಾಗೂ ಬೆಂಗಳೂರು ಪ್ರಾದೇಶಿಕ ಕಛೇರಿ ಮತ್ತು ಕೇಂದ್ರ ಕಛೇರಿಯು ಇದೇ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಇಲಾಖೆಯು ತೀವ್ರ ಸ್ಥಳದ ಅಭಾವವನ್ನು ಎದುರಿಸುತ್ತಿದೆ.

ಬೆಂಗಳೂರಿನಲ್ಲಿ ಸುಮಾರು 50–60 ಜನ ಅಮಲುಜಾರಿ ಅಧಿಕಾರಿಗಳಿದ್ದು, ತನಿಖೆಯ ಸಂದರ್ಭದಲ್ಲಿ ವಶಪಡಿಸಿಕೊಂಡ ಮುದ್ದೇ ಮಾಲನ್ನು (Seized Property) ಅಂದರೆ, ಔಷಧ ಮತ್ತು ಕಾಂತಿವರ್ಧಕ ಹಾಗೂ ಇತರೆ ಸಾಮಗ್ರಿಗಳನ್ನು ಪ್ರಕರಣ ಮುಗಿಯುವವರೆಗೆ ಇಲಾಖೆಯ ಸುಪರ್ದಿಯಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ. ಮತ್ತು ನ್ಯಾಯಾಲಯದಲ್ಲಿ ಪ್ರಕರಣ ನಡೆಯುವಾಗ ಸಂದರ್ಭಾನುಸಾರ ಇವುಗಳನ್ನು ಅಲ್ಲಿಗೆ ಕೊಂಡೊಯ್ಯಬೇಕಾಗುತ್ತದೆ. ಈ ಕಾರಣದಿಂದ, ಇಲಾಖೆಗೆ ಸ್ಥಳಾವಕಾಶದ ಅಗತ್ಯವಿರುತ್ತದೆ.

ರಾಜ್ಯ ಔಷಧ ನಿಯಂತ್ರಣ ಇಲಾಖಾ ಕಛೇರಿಯ ಹಿಂಭಾಗದ ಆವರಣದಲ್ಲಿ ಔಷಧ ನಿಯಂತ್ರಣ ಇಲಾಖೆಯ ಒಡೆತನಕ್ಕೆ ಸೇರಿದ ನಿವೇಶನ ಸಂಖ್ಯೆ 3ರಲ್ಲಿ ಸುಮಾರು 81,300 ಚದುರ ಅಡಿ ಜಾಗ ಖಾಲಿಯಿರುತ್ತದೆ. ಈ ಖಾಲಿ ಜಾಗದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (KPCL), ಬೆಂಗಳೂರು ಇವರು ಔಷಧ ನಿಯಂತ್ರಣ ಇಲಾಖೆಯ ಒಡೆತನದಲ್ಲಿರುವ ಸದರಿ ಖಾಲಿ ಜಾಗದಲ್ಲಿ ವಿಸ್ತೀರ್ಣ 81,300 ಚದುರ ಅಡಿಯಲ್ಲಿ ತನ್ನ ಸ್ವಂತ ಖರ್ಚಿನಲ್ಲಿ ಕಟ್ಟಡ ನಿರ್ಮಿಸಲು ಪ್ರಸ್ತಾಪಿಸಿದ್ದು, ಅದರಂತೆ ನಿಗಮವು ಖಾಲಿ ಜಾಗದಲ್ಲಿ L ಆಕಾರದಲ್ಲಿ ಎರಡು ಪ್ರತ್ಯೇಕ ಪ್ರವೇಶ ದ್ವಾರವಿರುವ 06 ಮಹಡಿಗಳ ಕಟ್ಟಡವನ್ನು (ವಾಹನ ನಿಲುಗಡೆಗಾಗಿ ನೆಲ ಅಂತಸ್ತು ಹೊರತುಪಡಿಸಿ) ನಿರ್ಮಿಸುವುದಾಗಿ, ಈ ಕಟ್ಟಡ ಪ್ರದೇಶವನ್ನು ಎರಡೂ ಇಲಾಖೆಗಳ ಉಪಯೋಗಕ್ಕಾಗಿ ಮಧ್ಯೆ ಗೋಡೆ ನಿರ್ಮಿಸಿ ಶೇಕಡಾ 50:50ರ ಅನುಪಾತದಲ್ಲಿ ಹಂಚಿಕೊಳ್ಳಲು ಒಮ್ಮತವನ್ನು ವ್ಯಕ್ತಪಡಿಸಿದ್ದು, ಅದರಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಇವರು ಹಂಚಿಕೆಯಾಗಿರುವ ಶೇಕಡಾ 50ರಷ್ಟು ಕಟ್ಟಡವನ್ನು ಅದರ ವ್ಯಾಪ್ತಿಯ ಜಮೀನು ಸೇರಿದಂತೆ 30 ವರ್ಷಗಳ ಗುತ್ತಿಗೆಗೆ ಔಷಧ ನಿಯಂತ್ರಕರು ನೀಡುವ ಷರತ್ತನ್ನು ಒಪ್ಪಿ, ಇಂಧನ ಸಚಿವಾಲಯದ ಮುಖಾಂತರ ಪ್ರಸ್ತಾವನೆಯನ್ನು ಸ್ವೀಕರಿಸಲಾಗಿದೆ. ಅಲ್ಲದೇ, ಸದರಿ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯೂ ಸಹ ಈ ಕೆಳಕಂಡಂತೆ ತನ್ನ ಒಪ್ಪಿಗೆಯನ್ನು ಸೂಚಿಸಿರುತ್ತದೆ.

a) The building should be used by Health Department and KPC for their own office or laboratory use.
b) KPC should not have any right to sub-lease its share.
c) The lease to KPC should be for a fixed 30 year period without any provision for extension".

ಮೇಲಿನ ಹಿನ್ನೆಲೆಯಲ್ಲಿ, ಔಷಧ ನಿಯಂತ್ರಣ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಔಷಧ ನಿಯಂತ್ರಣ ಇಲಾಖೆಯ ಆವರಣದ ಹಿಂಭಾಗದಲ್ಲಿರುವ ನಿವೇಶನ ಸಂಖ್ಯೆ: 3ರಲ್ಲಿರುವ ಸುಮಾರು 81,300 ಚದುರ ಅಡಿ

ಖಾಲಿ ಜಾಗದಲ್ಲಿ ಕಛೇರಿಯನ್ನು ನಿರ್ಮಾಣ ಮಾಡಲು ಸೂಕ್ತ ಷರತ್ತುಗಳೊಂದಿಗೆ ಒಡಂಬಡಿಕೆ ಪತ್ರವನ್ನು ಮಾಡಿಕೊಳ್ಳುವುದರೊಂದಿಗೆ ಸರ್ಕಾರವು ಅನುಮತಿಯನ್ನು ನೀಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 26 ಐಎಂಎಂ 2008, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಔಷಧ ನಿಯಂತ್ರಣ ಇಲಾಖೆಯ ಕಛೇರಿಯ ಹಿಂಭಾಗದಲ್ಲಿ ಖಾಲಿಯಿರುವ ನಿವೇಶನ ಸಂಖ್ಯೆ: 3ರಲ್ಲಿರುವ ಸುಮಾರು 81,300 ಚದುರ ಅಡಿ ಖಾಲಿ ಜಾಗದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ಔಷಧ ನಿಯಂತ್ರಣ ಇಲಾಖೆ ಇವರ ಸಹಭಾಗಿತ್ವದಲ್ಲಿ ಶೇಕಡಾ 50:50ರ ಅನುಪಾತದಲ್ಲಿ ಹಂಚಿಕೆ ಮಾಡಿಕೊಳ್ಳುವ ಈ ಕೆಳಕಂಡ ಷರತ್ತಿಗಳಿಗೊಳಪಟ್ಟು ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸದರಿ ಸ್ಥಳದಲ್ಲಿ ಕಟ್ಟಡ ನಿರ್ಮಾಣ ಮಾಡಲು ಸರ್ಕಾರದ ಅನುಮತಿಯನ್ನು ನೀಡಿದೆ.

1. ಔಷಧ ನಿಯಂತ್ರಣ ಇಲಾಖೆಯ ಒಡೆತನದಲ್ಲಿರುವ ಇಲಾಖಾ ಕಛೇರಿ ಆವರಣದ ಹಿಂಭಾಗದಲ್ಲಿನ ನಿವೇಶನ ಸಂಖ್ಯೆ 3ರಲ್ಲಿರುವ ಸುಮಾರು 81,300 ಚದುರ ಅಡಿ ಖಾಲಿ ಜಾಗದಲ್ಲಿ ಔಷಧ ನಿಯಂತ್ರಣ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮಗಳ ಉಪಯೋಗಕ್ಕಾಗಿ ಕೆಲವೊಂದು ಸೂಕ್ತ ಮತ್ತು ನಿಯಮಬದ್ಧ ಷರತ್ತು-ನಿಬಂಧನೆಗಳೊಂದಿಗೆ ಔಷಧ ನಿಯಂತ್ರಣ ಇಲಾಖೆ/ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ ಮತ್ತು ನಿಗಮವು/ ಇಂಧನ ಸಚಿವಾಲಯವು ಪರಸ್ಪರ ಒಮ್ಮತದಿಂದ ತಿಳುವಳಿಕೆ ಪತ್ರಕ್ಕೆ ಸಹಿ ಹಾಕಿ, ಕರ್ನಾಟಕ ವಿದ್ಯುತ್ ನಿಗಮವು ಈ ಜಾಗದಲ್ಲಿ ಕಟ್ಟಡ ನಿರ್ಮಿಸಲು ಮತ್ತು ಹೀಗೆ ನಿರ್ಮಿಸಿದ ಕಟ್ಟಡದಲ್ಲಿ ಲಭ್ಯವಾಗುವ ಕಛೇರಿ ಜಾಗದಲ್ಲಿ ಔಷಧ ನಿಯಂತ್ರಣ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮವು ಶೇಕಡಾ 50:50ರ ಅನುಪಾತದಲ್ಲಿ ಹಂಚಿಕೊಳ್ಳುವುದು.
2. ಕರ್ನಾಟಕ ವಿದ್ಯುತ್ ನಿಗಮದ ಪಾಲಿಗೆ ಬರುವ ಶೇಕಡಾ 50ರಷ್ಟು ಖಾಲಿ ನಿವೇಶನ ಹಾಗೂ ಅದರಲ್ಲಿ ನಿರ್ಮಿಸುವ ಕಛೇರಿ ಕಟ್ಟಡವನ್ನು ಔಷಧ ನಿಯಂತ್ರಣ ಇಲಾಖೆಯು ಸದರಿ ನಿಗಮಕ್ಕೆ 30 ವರ್ಷಗಳ ಗುತ್ತಿಗೆಗೆ ನೀಡತಕ್ಕದ್ದು. ಯಾವುದೇ ಕಾರಣಕ್ಕೂ ಈ ಗುತ್ತಿಗೆ ಅವಧಿಯನ್ನು ವಿಸ್ತರಿಸಲು ಅವಕಾಶ ನೀಡದಂತೆ ಷರತ್ತು ಮತ್ತು ನಿಬಂಧನೆಗಳನ್ನು ರೂಪಿಸಬೇಕು.
3. ಕಟ್ಟಡದ ಕಾಮಗಾರಿಯು ಪೂರ್ಣಗೊಳ್ಳುವವರೆಗೆ ಇದರ ಮೇಲುಸ್ತುವಾರಿಗಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ಇಂಧನ, ಔಷಧ ನಿಯಂತ್ರಣ, ಕೆ.ಪಿ.ಸಿ.ಎಲ್. ಅಧಿಕಾರಿಗಳ ಹಾಗೂ ಅಗತ್ಯ ತಜ್ಞರನ್ನು ಒಳಗೊಂಡ ಸಮಿತಿಯನ್ನು ರಚಿಸುವುದು.
4. ಕಟ್ಟಡವನ್ನು ಔಷಧ ನಿಯಂತ್ರಣ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ತನ್ನ ಕಛೇರಿ ಅಥವಾ ಪ್ರಯೋಗಾಲಯಕ್ಕೆ ಮಾತ್ರ ಉಪಯೋಗಿಸತಕ್ಕದ್ದು.
5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಬೇರೆಯವರಿಗೆ ತನ್ನ ಭಾಗದ ಕಟ್ಟಡವನ್ನು ಉಪಗುತ್ತಿಗೆ ನೀಡುವ ಹಕ್ಕನ್ನು ಹೊಂದಿರುವುದಿಲ್ಲ.

ಈ ಆದೇಶವನ್ನು ಇಂಧನ ಇಲಾಖೆಯ ಟಿಪ್ಪಣಿ ಸಂಖ್ಯೆ: ಇಎನ್ 109 ಪಿಪಿಸಿ 2008, ದಿನಾಂಕ 17.12.2008, ಕಂದಾಯ ಇಲಾಖೆಯ ಟಿಪ್ಪಣಿ ಸಂಖ್ಯೆ: ಆರ್‌ಡಿ 936 ಎಲ್‌ಜಿಬಿ 2008, ದಿನಾಂಕ 27.11.2008 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 2472 ವೆಚ್ಚ-5/2008, ದಿನಾಂಕ 10.12.2008ರ ಸಹಮತಿಯನುಸಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 610

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಭಾರತೀಯ ವೈದ್ಯ ಪದ್ಧತಿ)

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ :** ಶ್ರೀ ಎಸ್.ಪಿ. ರಾಜು, ಉಪ ನಿರ್ದೇಶಕರು (P&M), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಇವರ ವಿರುದ್ಧ ದಾಖಲಾಗಿರುವ ಅಕ್ರಮ ಆಸ್ತಿ ಹೊಂದಿರುವ ಪ್ರಕರಣ – ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :** ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/INV(G)/CBL/A2/CR-1/2009, ಚಿತ್ರದುರ್ಗ ದಿನಾಂಕ 27.1.2009.

**ಪ್ರಸ್ತಾವನೆ :**

ಶ್ರೀ ಎಸ್.ಪಿ. ರಾಜು, ಉಪ ನಿರ್ದೇಶಕರು (ಪ್ಲಾನಿಂಗ್ ಮತ್ತು ಮಾನಿಟರಿಂಗ್), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಇವರು ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಸಂಪತ್ತು ಹೊಂದಿರುತ್ತಾರೆ ಎಂಬ ನಂಬಲರ್ಹ ಮಾಹಿತಿಯ ಆಧಾರದ ಮೇರೆಗೆ ಇವರ ವಿರುದ್ಧ ಚಿತ್ರದುರ್ಗ ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ–13 (1)(ಇ) ಸಹವಾಚನ 13(2)ರ ಪ್ರಕಾರ ಮೊಕದ್ದಮೆ ಸಂಖ್ಯೆ: 1/2009 ರಂತೆ ಪ್ರಕರಣವನ್ನು ದಾಖಲಿಸಿಕೊಳ್ಳಲಾಗಿದ್ದು, ಈ ಸಂಬಂಧ ಅಗತ್ಯವಾದ ಶೋಧನಾ ವಾರೆಂಟ್‌ಗಳನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ವಿಶೇಷ ನ್ಯಾಯಾಧೀಶರು, ಚಿತ್ರದುರ್ಗ ಇವರಿಂದ ಪಡೆದು, ಅಧಿಕಾರಿಯ ಚಿತ್ರದುರ್ಗ ಮತ್ತು ಬೆಂಗಳೂರಿನಲ್ಲಿನ ನಿವಾಸಗಳನ್ನು, ಅಧಿಕಾರಿಯ ತಂದೆಯವರ ಚಿತ್ರದುರ್ಗ ವಾಸದ ಮನೆಯನ್ನು ಮತ್ತು ಅಧಿಕಾರಿಯ ಕಛೇರಿಯನ್ನು ದಿನಾಂಕ 23.1.2009ರಂದು ಪಂಚ ಸಾಕ್ಷಿಗಳ ಸಮಕ್ಷಮ ಶೋಧಿಸಲಾಗಿ, ಪ್ರಾಥಮಿಕ ತನಿಖೆಯಿಂದ ಅಧಿಕಾರಿಯು ತಮ್ಮ ಗೊತ್ತಾದ ಆದಾಯಕ್ಕಿಂತ ರೂ. 1,12,38,673–00 ಗಳನ್ನು ಹೆಚ್ಚಾಗಿ ಅಕ್ರಮ ಆಸ್ತಿಪಾಸ್ತಿಗಳನ್ನು ಹೊಂದಿರುವುದು ತಿಳಿದುಬಂದಿರುವುದಾಗಿ ಮತ್ತು ಸದರಿ ಚರಾ ಮತ್ತು ಚಿರಾಸ್ತಿಗಳ ಮೌಲ್ಯವು ಸದರಿ ಅಧಿಕಾರಿಯ ನಿಗಧಿತ ಮೂಲಗಳಿಂದ ಗಳಿಸಿರುವ ವರಮಾನಕ್ಕಿಂತ ಶೇಕಡಾ 351.20ರಷ್ಟು ಹೆಚ್ಚಿನ ಮೊತ್ತವಾಗಿರುತ್ತದೆಯೆಂದು ತಿಳಿಸುತ್ತಾ, ಅಧಿಕಾರಿಯು ತಮ್ಮ ಗೊತ್ತಾದ ಆದಾಯಕ್ಕಿಂತ ಹೆಚ್ಚಿನ ಅಕ್ರಮ ಆಸ್ತಿಗಳನ್ನು ಹೊಂದಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ಇವರ ವಿರುದ್ಧದ ಪ್ರಕರಣದ ಸುಗಮ ತನಿಖೆಗೆ ಅಡ್ಡಿಯುಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿಪುರಾವೆಗಳನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಶ್ರೀ ಎಸ್.ಪಿ. ರಾಜು, ಉಪ ನಿರ್ದೇಶಕರು, ಇವರನ್ನು ಕೂಡಲೇ ಅಮಾನತ್ತಿನಲ್ಲಿಡಲು ಹಾಗೂ ಇವರ ಲೀನ್‌ನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 10 ಎಂಜಿಎಸ್ 2009, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ ಶ್ರೀ ಎಸ್.ಪಿ. ರಾಜು, ಉಪ ನಿರ್ದೇಶಕರು, (P&M) ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಇವರು ತಮ್ಮ ಗೊತ್ತಾದ ಆದಾಯಕ್ಕಿಂತ ಹೆಚ್ಚಿನ ಅಕ್ರಮ ಆಸ್ತಿಗಳನ್ನು ಹೊಂದಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ಇವರ ವಿರುದ್ಧದ ಪ್ರಕರಣದ ಸುಗಮ ತನಿಖೆಗೆ ಅಡ್ಡಿಯುಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ, ಶ್ರೀ ಎಸ್.ಪಿ. ರಾಜು, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ನಾಗರೀಕ ಸೇವಾ (ನಿಯಂತ್ರಣ, ವರ್ಗೀಕರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ–10(1)(aa)ರ ಪ್ರಕಾರ ಸರ್ಕಾರವು ಅಮಾನತ್ತುಗೊಳಿಸಿದೆ.

ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಇವರ ಲೀನ್ ಅನ್ನು ಉಪನಿರ್ದೇಶಕರು, ಸೇಡಂ ಹುದ್ದೆಗೂ ಮತ್ತು ಅಮಾನತ್ತಿನಲ್ಲಿರುವ ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಇವರ ಲೀನ್ ಅನ್ನು ಉಪ ನಿರ್ದೇಶಕರು (ಪಿ.ಎಂ.ಯು.), ಕೇಂದ್ರ ಕಛೇರಿಗೆ ವರ್ಗಾಯಿಸಿದೆ.

ಸದರಿ ಅಧಿಕಾರಿಯು ಅಮಾನತ್ತಿನ ಅವಧಿಯಲ್ಲಿ ನಿಯಮಾನುಸಾರ ಜೀವನಧಾರ ಭತ್ಯೆ ಪಡೆಯಲು ಸರ್ಕಾರವು ಅನುಮತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 811

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ :** ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕು, ಗಾಮನಗಟ್ಟಿ ಗ್ರಾಮದ ಬ್ಲಾಕ್ ನಂ. 208ರ 278–20 ಎಕರೆ ಇನಾಂ ಜಮೀನಿಗೆ ದಯಾತ್ಮಕ ಪರಿಹಾರ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :**

1. ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ 26.10.2008ರ ಸಭೆಯ ನಡವಳಿ.
2. ಜಿಲ್ಲಾಧಿಕಾರಿಗಳು, ಧಾರವಾಡ ಇವರ ಅ.ಸ. ಪತ್ರ ಸಂಖ್ಯೆ: ಡಬ್ಲ್ಯೂಎಟಿಎನ್/ಸಿಆರ್–10/05–06, ದಿನಾಂಕ 14.10.2008 ಮತ್ತು 30.10.2008.

**ಪ್ರಸ್ತಾವನೆ :**

ದಿನಾಂಕ 1.7.2006ರಂದು ನಡೆದ ಕೆಐಎಡಿಬಿ ಸಭೆಯಲ್ಲಿ ಧಾರವಾಡ ಜಿಲ್ಲೆ, ತಾರೀಹಾಳ್ ಮತ್ತು ಗಾಮನಗಟ್ಟಿ ಗ್ರಾಮಗಳಲ್ಲಿ 500-00 ಎಕರೆ ಜಮೀನನ್ನು ಮಂಡಳಿಯಿಂದ ಕೈಗಾರಿಕಾ ಪ್ರದೇಶಕ್ಕಾಗಿ ಭೂಸ್ವಾಧೀನ ಪಡಿಸಲು ನಿರ್ಣಯವಾಗಿರುತ್ತದೆ. ಮಂಡಳಿ ಸಭೆಯ ನಿರ್ಣಯದಂತೆ 231 ಎಕರೆ 23 ಗುಂಟೆ ಖಾಸಗಿ ಹಾಗೂ 278 ಎಕರೆ 20 ಗುಂಟೆ ಸರ್ಕಾರಿ ಜಮೀನುಗಳು ಸೇರಿ ಒಟ್ಟು 510 ಎಕರೆ 03 ಗುಂಟೆ ಜಮೀನನ್ನು ಭೂಸ್ವಾಧೀನ ಪಡಿಸಲು ಪ್ರಸ್ತಾಪಿಸಲಾಗಿತ್ತು. ಅದರಂತೆ ಅಧಿಸೂಚನೆ ಸಂಖ್ಯೆ: ಸಿಐ 245 ಎಸ್‌ಪಿಕ್ಯೂ 2006, ದಿನಾಂಕ 19.8.2006ರಂದು 226 ಎಕರೆ 38 ಗುಂಟೆ ಖಾಸಗಿ ಜಮೀನಿಗೆ ಕೆಐಎಡಿ ಕಲಂ 28(1)ರನ್ವಯ ಪ್ರಾರಂಭಿಕ ಅಧಿಸೂಚನೆ ಹೊರಡಿಸಲಾಗಿದೆ. ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 246 ಎಸ್‌ಪಿಕ್ಯೂ 2007, ದಿನಾಂಕ 17.5.2007ರಂದು 278 ಎಕರೆ 20 ಗುಂಟೆ ಸರ್ಕಾರಿ ಜಮೀನಿಗೆ ಪ್ರತ್ಯೇಕವಾಗಿ ಕೆ.ಐ.ಎ.ಡಿ. ಕಲಂ 28(1)ರ ಅಧಿಸೂಚನೆ ಹೊರಡಿಸಲಾಗಿದೆ.

2. ತದನಂತರ ಒಟ್ಟು 510 ಎಕರೆ 03 ಗುಂಟೆ ಜಮೀನಿಗೆ ಕೆಐಎಡಿ ಕಲಂ 28(4)ರಂತೆ ಅಧಿಸೂಚನೆ ಸಂಖ್ಯೆ: ಸಿಐ 246 ಎಸ್‌ಪಿಕ್ಯೂ 2007, ದಿನಾಂಕ 6.10.2007ರಂದು ಅಂತಿಮ ಅಧಿಸೂಚನೆಯನ್ನು ಹೊರಡಿಸಲಾಗಿದೆ.

3. ಜಿಲ್ಲಾಧಿಕಾರಿಗಳು, ಧಾರವಾಡ ಇವರು ಓದಲಾದ (2)ರ ದಿನಾಂಕ 14.10.2008ರ ಪತ್ರದಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಕೈಗಾರಿಕಾ ಪ್ರದೇಶಕ್ಕೆ ಒಟ್ಟು 510 ಎಕರೆ 03 ಗುಂಟೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲಾಗಿದೆ. ಇದರಲ್ಲಿ 231 ಎಕರೆ 23 ಗುಂಟೆ ಖಾಸಗಿ ಜಮೀನು ಮತ್ತು 278 ಎಕರೆ 20 ಗುಂಟೆ ಸರ್ಕಾರಿ ಜಮೀನು ಇರುತ್ತದೆ. ಖಾಸಗಿ ಜಮೀನಿಗೆ ಈಗಾಗಲೇ ಪ್ರತಿ ಎಕರೆಗೆ ರೂ. 13.36 ಲಕ್ಷ ಭೂ ದರ ನಿಗದಿಯಾಗಿದೆ. ಅದರಂತೆ ಹಣ ಸಹ ಪಾವತಿ (consent award) ಮಾಡಲಾಗಿದೆ. ಸರ್ಕಾರಿ ಜಮೀನು ಹಾಗೂ ಖಾಸಗಿ ಜಮೀನು ಸಂಪೂರ್ಣವಾಗಿ ಸ್ವಾಧೀನಪಡಿಸಿಕೊಳ್ಳದ ಹೊರತು ಖಾಸಗಿ ಜಮೀನಿಗೆ ಹಣ ಪಾವತಿ ಮಾಡಿರುವುದರಿಂದ ಸದರಿ ಜಮೀನನ್ನು ಉಪಯೋಗಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಭೂ ದಾಖಲೆಗಳ ಪ್ರಕಾರ 278 ಎಕರೆ 20 ಗುಂಟೆ ಜಮೀನು (ಹಿಂದಿನ ಸರ್ವೆ ನಂ: 60) ಖರಾಬು ಜಮೀನು ಆಗಿದ್ದು 1957-58ರಿಂದ RTCಯಲ್ಲಿನ ಕಾಲಂ 12ರಲ್ಲಿ ಖರಾಬು ಜಮೀನು ಎಂದು ದಾಖಲಾಗಿರುತ್ತದೆ. ಆದರೆ ಈ ಜಮೀನನ್ನು ಅನಧಿಕೃತ ಸಾಗುವಳಿ ಮಾಡುತ್ತಿದ್ದ ರೈತರು Principal Civil Judge (Senior Division) Hubli ಇಲ್ಲಿನ ನ್ಯಾಯಾಲಯದಲ್ಲಿ ದಾವೆ ಹೂಡಿ ತಮ್ಮ ಸಾಗುವಳಿ ಖರಾಬು ಜಮೀನಿನ ಹಕ್ಕನ್ನು ತಮಗೆ ನೀಡಲು ಪ್ರಾರ್ಥಿಸಿದ್ದರು. ಮಾನ್ಯ ನ್ಯಾಯಾಲಯವು ದಿನಾಂಕ 20.4.2006ರ ಆದೇಶದಲ್ಲಿ ಮನವಿದಾರರ ಮನವಿಯನ್ನು ತಿರಸ್ಕರಿಸಿರುತ್ತದೆ. ನಂತರ ಅನಧಿಕೃತ ಸಾಗುವಳಿದಾರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ Regular First Appeal ಸಂ: 971, 1175, 1177, 1178 ರಿಂದ 1183, 1619 to 1622, 1625 1537, 1547, 1548, 1558 to 1561/2006 ಸಲ್ಲಿಸಿರುತ್ತಾರೆ. ಸದರಿ RFA ದಿನಾಂಕ 31.10.2006ರಂದು ಈ ಕೆಳಕಂಡಂತೆ ಆದೇಶವಾಗಿರುತ್ತದೆ.

> The appeals are partly allowed. The judgment and decree dated 20th April 2006 passed on O.S. No. 135, 136, 137, 138, 139, 140, 141, 142, 143, 144, 145, 146, 147, 148, 149, 150, 151, 152, 153, 154 and 1554 of 2005 by the Principal Civil Judge (Sr. Divn.), Hubli is set aside. The suit is decreed granting decree for permanent injunction restraining the respondents from interfering with peaceful possession and enjoyment of the respective suit lands by the plaintiffs. In so far as the declaration declaring that the plaintiffs- appellants have perfected their title over the suit schedule property is concerned, same is dismissed.
>
> Appeals are partly allowed subject to above observation. However, no order as to the cost.

4. ಈ ಆದೇಶದ ವಿರುದ್ಧ ಕಂದಾಯ ಇಲಾಖೆಯು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಸಂಖ್ಯೆ: 5624/2007ರಲ್ಲಿ SLP ದಾಖಲು ಮಾಡಿರುತ್ತದೆ.

5. ಮೇಲೆ ಓದಲಾದ (2)ರ ದಿನಾಂಕ 30.10.2008ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಧಾರವಾಡ ಇವರು ಗಾಮನಗಟ್ಟಿ ಗ್ರಾಮದ ಬ್ಲಾಕ್ ನಂ. 208ರಲ್ಲಿ ಭೂಸ್ವಾಧೀನಪಡಿಸಿಕೊಂಡಿರುವ ಜಮೀನಿನಲ್ಲಿ 278 ಎಕರೆ 20 ಗುಂಟೆ ಜಮೀನು ಸರ್ಕಾರಿ ಜಮೀನು ಆಗಿದ್ದು ಈ ಜಮೀನು ಪ್ರಸ್ತುತ ರೈತರುಗಳ ಮತ್ತು ಸರ್ಕಾರದ ಮಧ್ಯ ತಕರಾರಿನಲ್ಲಿ ಇರುತ್ತದೆ. Bombay Personal Inam Abolition Act ಅಡಿಯಲ್ಲಿ ರಾಜ್ಯ ಸರ್ಕಾರವು ಈ ಜಮೀನು ಸರ್ಕಾರಕ್ಕೆ ಸೇರಿದ ಜಮೀನು ಎಂದು ಆದರೆ ರೈತರು ತಮ್ಮ ಈ ಜಮೀನಿನ tenants of the Inamder ಆಗಿದ್ದು, ಜಮೀನಿನ ಹಕ್ಕು ತಮಗೆ ಸಲ್ಲುವುದೆಂದು ವಾದ

ಮಂಡಿಸಿರುತ್ತಾರೆ. ಈ ಬಗ್ಗೆ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರನ್ನು ಜಿಲ್ಲಾಧಿಕಾರಿಗಳು, ಧಾರವಾಡ ಇವರು ಸ್ಪಷ್ಟೀಕರಣ ಕೇಳಿದಾಗ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಸಮ್ಮುಖದಲ್ಲಿ ಜಿಲ್ಲಾಧಿಕಾರಿಗಳು, ಧಾರವಾಡ ಇವರನ್ನು ಒಳಗೊಂಡಂತೆ ಸಭೆ ನಡೆಸಲಾಗಿದೆ. ಸದರಿ ಸಭೆಯಲ್ಲಿ ಜಿಲ್ಲಾ ಉಸ್ತುವಾರಿ ಸಚಿವರ ಸಮ್ಮುಖದಲ್ಲಿ ರೈತರುಗಳನ್ನು ಒಳಗೊಂಡಂತೆ ನ್ಯಾಯಾಲಯದಿಂದ ಹೊರಗಡೆ ಸಮಸ್ಯೆ ಇತ್ಯರ್ಥಪಡಿಸಿಕೊಳ್ಳಲು ಸಭೆಯನ್ನು ಕರೆಯಲು ತೀರ್ಮಾನಿಸಲಾಗಿತ್ತು. ಅದರಂತೆ ದಿನಾಂಕ 26.10.2008ರಂದು ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಹುಬ್ಬಳ್ಳಿಯಲ್ಲಿ ರೈತರುಗಳನ್ನೊಳಗೊಂಡು ಸಭೆ ಜರುಗಿಸಲಾಗಿತ್ತು. ಸದರಿ ಸಭೆಯಲ್ಲಿ ಈ ಕೆಳಕಂಡಂತೆ ನಿರ್ಣಯ ತೆಗೆದುಕೊಳ್ಳಲಾಗಿದೆ ಎಂದು ತಿಳಿಸಿರುತ್ತಾರೆ.

> As per the discussions the farmers have agreed for an out of court settlement of Rs. 10.02 lakhs per Acre, which would be 75% of the amount determined for the acquisition i.e. Rs. 13.36 Lakhs per Acre. The farmers have agreed to relinguish all their rights, withdraw all the litigations and hand over the possession of the lands in case the above-mentioned compensation is paid to them. The letter of indemnity executed by the farmers, who are in possession of the land, is sent to the Government.

6. ಈಗಾಗಲೇ ಇಂತಹ ಜಮೀನಿನ ಬಗ್ಗೆ ಶಿವಮೊಗ್ಗ ವಿಮಾನ ನಿಲ್ದಾಣಕ್ಕೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವಾಗ ex-gratia ಮೊತ್ತ ರೈತರಿಗೆ ಪಾವತಿಸಲಾಗಿದ್ದ ಬಗ್ಗೆ ಸಭೆಯಲ್ಲಿ ಚರ್ಚಿಸಲಾಯಿತು. ಈ ಅನಧಿಕೃತ ಸಾಗುವಳಿದಾರರೊಡನೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರು ಚರ್ಚಿಸಿದಾಗ ತಾವು ಸಾಗುವಳಿ ಮಾಡುತ್ತಿರುವ ಜಮೀನಿಗೆ ex-gratia ಮೊತ್ತ ಪಾವತಿಸಿದಲ್ಲಿ ತಮ್ಮ ಹಕ್ಕನ್ನು ಬಿಟ್ಟು ಕೊಡಲಾಗುವುದು ಎಂದು ತಿಳಿಸಿರುತ್ತಾರೆ.

7. ಈ ಬಗ್ಗೆ ಕಂದಾಯ ಇಲಾಖೆಯ ಅಭಿಪ್ರಾಯವನ್ನು ಪಡೆಯಲಾಯಿತು. ಕಂದಾಯ ಇಲಾಖೆಯಿಂದ ಟಿಪ್ಪಣಿ ಸಂಖ್ಯೆ: ಕಂಇ 88 ಭೂಸ್ವಾವ್ಯ 2008 ದಿನಾಂಕ 9.1.2009ರಲ್ಲಿ ಹಾಗೂ ದಿನಾಂಕ 17.2.2009ರಲ್ಲಿ ಅಭಿಪ್ರಾಯ ನೀಡಿರುತ್ತದೆ. ಕಂದಾಯ ಇಲಾಖೆಯ ಅಭಿಪ್ರಾಯದ ಅನ್ವಯ ವಿಷಯವನ್ನು ಸಚಿವ ಸಂಪುಟ ಸಭೆಯಲ್ಲಿ ಮಂಡಿಸಲಾಯಿತು.

8. ಈ ಯೋಜನೆಯ ಜಮೀನಿನ ಬಗ್ಗೆ ಈಗಾಗಲೇ ಸರ್ಕಾರದ ಪ್ರತಿನಿಧಿಯಾಗಿ, ಉನ್ನತ ಮಟ್ಟದ ಸಭೆಯ ನಿರ್ಣಯದಂತೆ ಮಾನ್ಯ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಉಸ್ತುವಾರಿ ಮಂತ್ರಿಗಳು ರೈತರೊಡನೆ ಸಭೆ ನಡೆಸಿ, ಒಮ್ಮತ ನಿರ್ಣಯಕ್ಕೆ ಬಂದು ರೈತರಿಂದ ಒಪ್ಪಿಗೆ ಪತ್ರಗಳನ್ನು ಸಹ ಪಡೆದಿರುವುದರಿಂದ ಈಗ ಪರಿಹಾರ ಧನ ನೀಡುವಲ್ಲಿ ವ್ಯತ್ಯಯವಾದರೆ ಹುಬ್ಬಳ್ಳಿ ಧಾರವಾಡದಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ಐಟಿ–ಬಿಟಿ ಯೋಜನೆಗೆ ಮತ್ತು ಇತರೆ ಕೈಗಾರಿಕಾ ಅಭಿವೃದ್ಧಿಗೆ ಸ್ಥಳ ಒದಗಿಸಲು ಸಾಧ್ಯವಾಗುವುದಿಲ್ಲ. ಇದರ ಸುತ್ತಮುತ್ತಲಿನ ಪ್ರದೇಶಗಳಲ್ಲಿನ ಆಸ್ತಿ ಬೆಲೆಯು ಈಗಾಗಲೇ ಸುಮಾರು 3 ಪಟ್ಟು ಹೆಚ್ಚಾಗಿರುವುದರಿಂದ ಇನ್ನು ವಿಳಂಬವಾದರೆ ಸರ್ಕಾರಕ್ಕೆ ಹೆಚ್ಚಿನ ಭಾರವಾಗಬಾರದು ಎಂಬ ಉದ್ದೇಶದಿಂದ ಹಾಗೂ ಹೊಸ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪರಿಹಾರ ಧನ ನಿಗದಿಯಾಗುವ ಮೊದಲು ಈ ಹಿಂದಿನ ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಳಿಸುವುದು ಸರ್ಕಾರದ ದೃಷ್ಟಿಯಿಂದ ಹೆಚ್ಚು ಆರೋಗ್ಯಕರ ಬೆಳವಣಿಗೆಯಾಗುತ್ತದೆ.

9. ಈ ಹಿನ್ನೆಲೆಯಲ್ಲಿ ಕೆ.ಐ.ಎ.ಡಿ.ಬಿ.ಯಿಂದ ಸ್ವಾಧೀನವಾಗಿರುವ ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕು, ಗಾಮನಗಟ್ಟಿ ಗ್ರಾಮದ ಬ್ಲಾಕ್ ನಂ. 208ರ 278 ಎಕರೆ 20 ಗುಂಟೆ ಇನಾಂ ಜಮೀನಿನ ಭೂ ಮಾಲೀಕರಿಗೆ ದಯಾತ್ಮಕ ಪರಿಹಾರವಾಗಿ ನೀಡುವ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 246 ಎಸ್‌ಪಿಕ್ಯೂ 2007, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2009**

1) ಹುಬ್ಬಳ್ಳಿ–ಧಾರವಾಡದಲ್ಲಿ ಕೈಗಾರಿಕಾಭಿವೃದ್ಧಿ ದೃಷ್ಟಿಯಿಂದ ಹುಬ್ಬಳ್ಳಿ ತಾಲ್ಲೂಕು, ಗಾಮನಗಟ್ಟಿ ಗ್ರಾಮದಲ್ಲಿ ಭೂಸ್ವಾಧೀನ ಪಡಿಸಿಕೊಂಡ ಖಾಸಗೀ ಜಮೀನಿನ ಮಾಲೀಕರಿಗೆ ಪ್ರತಿ ಎಕರೆಗೆ ರೂ. 13,36,000/–ರಂತೆ ಪಾವತಿ ಮಾಡಲಾಗುತ್ತಿದ್ದು, ಸದರಿ ಗ್ರಾಮದ ಬ್ಲಾಕ್ ನಂ: 208ರಲ್ಲಿನ ಕ್ಷೇತ್ರ 278 ಎಕರೆ 20 ಗುಂಟೆ ಇನಾಂ ಜಮೀನಿನಲ್ಲಿ ಅನಾದಿ ಕಾಲದಿಂದಲೂ ಪ್ರತ್ಯೇಕವಾಗಿ ಸಾಗುವಳಿ ಮಾಡುತ್ತಿರುವ ಒಟ್ಟು 21 ರೈತ ಕುಟುಂಬದವರಿಗೆ ಖಾಸಗಿ ಜಮೀನು ಮಾಲೀಕರಿಗೆ ಪ್ರತಿ ಎಕರೆಗೆ ನೀಡಿದ ಈ ಪರಿಹಾರ ಧನದಲ್ಲಿನ ಮೊತ್ತದಲ್ಲಿ ಶೇಕಡಾ 75ರಷ್ಟು ಅಂದರೆ ಪ್ರತಿ ಎಕರೆಗೆ ರೂ. 10,02,000/–ಗಳನ್ನು ಸದರಿ ರೈತರುಗಳು ಮಾನ್ಯ ನ್ಯಾಯಾಲಯಗಳಲ್ಲಿ ದಾಖಲಿಸಿರುವ ವ್ಯಾಜ್ಯಗಳನ್ನು ಹಿಂಪಡೆದು, ತಮ್ಮ ಹಕ್ಕುಗಳನ್ನು ಬಿಟ್ಟುಕೊಟ್ಟನಂತರ ಪಾವತಿಸಲು ಹಾಗೂ ಕೆ.ಐ.ಎ.ಡಿ.ಬಿ.ಯು ರೈತರು ಮತ್ತು ಸರ್ಕಾರದ ಮಧ್ಯೆ ಇರುವ ಎಲ್ಲಾ ವ್ಯಾಜ್ಯಗಳನ್ನು ಅಂತ್ಯಗೊಳಿಸಿ, ಆಸ್ತಿಯನ್ನು ಕಬ್ಜೆಗೆ ಪಡೆಯುವುದು.

ಸಾಗುವಳಿ ಚೀಟಿ ವಿತರಿಸಿರುತ್ತಾರೆ. ಅಹವಾಲು ತಃಖ್ತೆಯನ್ನು ಒಂದೇ ಕುಟುಂಬದ ಸದಸ್ಯರೆಂದು ನಮೂದಿಸಿ ತಹಶೀಲ್ದಾರ್ ಹಾಗು ರಾಜಸ್ವ ನಿರೀಕ್ಷಕರು ಹಾಗೂ ಗ್ರಾಮಲೆಕ್ಕಾಧಿಕಾರಿಗಳು ದುರುದ್ದೇಶದಿಂದ ಸರ್ಕಾರಿ ಜಮೀನು ಅನಧಿಕೃತವಾಗಿ ಖಾತೆ ಮಾಡಲು ಈ ಕೆಳಕಂಡ ಅಧಿಕಾರಿ/ನೌಕರರು ಹೊಣೆಗಾರರಾಗಿರುವುದರಿಂದ ಅವರ ವಿರುದ್ಧ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957ರ ನಿಯಮ 13ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಕರುಡು ದೋಷಾರೋಪಣಾ ಪಟ್ಟಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

1) ಶ್ರೀ ಟಿ.ಎಲ್. ನಾಯಕ್, ತಹಶೀಲ್ದಾರ್, ಹೊಸಕೋಟೆ (ನಿವೃತ್ತ).

2) ಶ್ರೀ ಜಿ.ಎಸ್ .ರಘುನಾಥ್, ರಾಜಸ್ವ ನಿರೀಕ್ಷಕರು, ನಂದಗುಡಿ ಹೋಬಳಿ, ಹೊಸಕೋಟೆ ತಾಲ್ಲೂಕು, ಹಾಲಿ ಪ್ರ.ದ.ಸ. ತಾಲ್ಲೂಕು ಕಛೇರಿ, ಕನಕಪುರ.

3) ಶ್ರೀ ಟಿ. ಮುನಿರಾಜು, ಗ್ರಾಮಲೆಕ್ಕಿಗರು, ಕರಪ್ಪನಹಳ್ಳಿ ವೃತ್ತ, ನಂದಗುಡಿ ಹೋಬಳಿ, ಹೊಸಕೋಟೆ ತಾಲ್ಲೂಕು, ಹಾಲಿ ಜಾಲಮಂಗಲ ವೃತ್ತ, ರಾಮನಗರ ತಾಲ್ಲೂಕು.

ಸದರಿ ಅಧಿಕಾರಿಯ/ನೌಕರರ ವಿರುದ್ಧ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ1ರಿಂದ 4ರವರೆಗೆ) ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ, ಶ್ರಿ ಟಿ.ಎಲ್. ನಾಯಕ್, ನಿವೃತ್ತ ತಹಶೀಲ್ದಾರ್, ಶ್ರೀ ಜಿ.ಎಸ್ .ರಘುನಾಥ್, ರಾಜಸ್ವ ನಿರೀಕ್ಷಕರು, ಹಾಗೂ ಶ್ರೀ ಟಿ. ಮುನಿರಾಜು, ಗ್ರಾಮಲೆಕ್ಕಿಗರು ಇವರು ಮೇಲೆ ಕ್ರ.ಸಂ (3)(4) ಮತ್ತು (5)ರಲ್ಲಿ ಓದಲಾದ ತಮ್ಮ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧ ಆರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗೆಳೆದಿರುತ್ತಾರೆ.ಆದುದರಿಂದ ಆರೋಪಿತ ಅಧಿಕಾರಿ ಹಾಗೂ ನೌಕರರ ವಿರುದ್ಧ ಆರೋಪಗಳು ಹಾಗೂ ಇದಕ್ಕೆ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ, ಶ್ರೀ ಕುಕ್ಕಾಜಿ ರಾಮಕೃಷ್ಣ ಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ:2, 1ನೇ ಕ್ರಾಸ್, ಜುಡುಷಿಯಲ್ ಲೇಔಟ್, ಸಂಜಯನಗರ, ಬೆಂಗಳೂರು–560094 ಇವರನ್ನು ವಿಚಾರನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಆರ್‌ಡಿ 27 ಎಡಿಇ 2008, ಬೆಂಗಳೂರು, ದಿನಾಂಕ:9ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ನಿಯಮ 13 ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಗಳು ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಕುಕ್ಕಾಜಿ ರಾಮಕೃಷ್ಣ ಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ:2, 1ನೇ ಕ್ರಾಸ್, ಜುಡಿಷಿಯಲ್, ಲೇಔಟ್, ಸಂಜಯನಗರ, ಬೆಂಗಳೂರು–560094 ಇವರನ್ನು ಈ ಕೆಳಕಂಡ ಆರೋಪಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು, ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

1) ಶ್ರೀ ಟಿ.ಎಲ್. ನಾಯಕ್, ಹಿಂದಿನ ತಹಶೀಲ್ದಾರ್ ಹೊಸಕೋಟೆ ತಾಲ್ಲೂಕು, [ಪ್ರಸ್ತುತ ನಿವೃತ್ತರು]

2) ಶ್ರೀ ಜಿ.ಎಸ್. ರಘುನಾಥ್, ರಾಜಸ್ವ ನಿರೀಕ್ಷಕರು, ನಂದಗುಡಿ, ಪ್ರಸ್ತುತ ಪ್ರ.ದ.ಸ. ತಾಲ್ಲೂಕು ಕಛೇರಿ, ಕನಕಪುರ

3) ಶ್ರಿ ಟಿ. ಮುನಿರಾಜು, ಗ್ರಾಮಲೆಕ್ಕಿಗರು, ಕರಪ್ಪನಹಳ್ಳಿ, ವೃತ್ತ, ನಂದಗುಡಿ ಹೋಬಳಿ, ಹೊಸಕೋಟೆ ತಾಲ್ಲೂಕು, ಹಾಲಿ ಜಾಲಮಂಗಲ ವೃತ್ತ, ರಾಮನಗರ ತಾಲ್ಲೂಕು.

ಶಿಸ್ತು ಪ್ರಾಧಿಕಾರದ ಪರವಾಗಿ, ಪ್ರಕರಣವನ್ನು ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಹಶೀಲ್ದಾರ್ ರವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಲು ನಿರ್ಧರಿಸಿದೆ. 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಹಶೀಲ್ದಾರರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು.. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ. ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂ:ಸಿಆಸುಇ 22 ಸೇಇವಿ 2007, ದಿನಾಂಕ:11.4.2008ರನ್ವಯ ರೂ. 8,000/–(ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಅನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿವಿಧಾನವನ್ನು ಅನುಸರಿಸಿ, ಜರುಗಿಸಿ, ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2367

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## HORTICULTURE SECRETARIAT

**Sub :** "Scheme for Integrated Farming in Coconut for Productivity/Improvement with Coconut Development Board Assistance (100%CDB)" State Level Administrative Approval for the year 2009-10-reg.

**Read :**
1. GO No,. AHD 53 HPP 2007, dated:24.6.2008.
2. Letter of Director of Horticulture No. DH/PC/AHO-2/1/2009-10 dated 25.8.2009.
3. Letter of CDB F.No. ROB/13011/Dev-Kar/Sch/09-10 dated:23.9.2009.

**PREAMBLE:**

1. State Level Administrative Approval had been accorded for implementing the Coconut Development programmes during the year 2009-10 with a total financial outlay of Rs .632.294 lakhs of which components to the tune of Rs .303.03 lakhs will be implemented by the Department of Horticulture and componenets to the tune of Rs. 3033.03 lakhs will be implemented by the Department of Horticultuire and components to the tune of Rs .329.264 lakhs will be implemented by the Coconut Development Board directly vide Government Order read at (1) above.

2. Coconut Development Board has informed vide its letter read at (3) above that Board has received the justification for the additional expenditure incurred during 2008-09 from the Director of Horticulture and will consider for releasing the balance fund of Rs. 211.75 lakhs for the maintenance of Laying Out of Demonstration Plots after obtaining the revised State Level Administrative Approval and has requested to issue a revised Government Order.

3. The Director of Horticulture in his letter address to the Chairman, Coconut Development Board, read at (2) above has informed that for the year 2009-10 against the requirement of Rs .351.75 lakhs for maintenance of 2010 hectares old plots of 2008-09, Coconut Development Board has allocated only 800 hectares of lod demonstration plot of 2008-09 for maintenance at a cost of Rs. 140.00 lakhs, Hence, he has requested the Coconut Development Board to release the remaining Rs .211.75 lakhs for maintenance of 1210 hectares of old plots as additional grants.

4. Coconut Development Board has agreed to consider the release of Rs .211.75 lakhs and hence this order;

**Government Order No. AHD 53 HPP 2009, Bangalore, Dated:9$^{th}$ October, 2009**

Government is pleased to accord State Level Administrative Approval for implementing the Coconut Development Programmes with an additional allocation of Rs.211.75 lakhs (Rupees Two Hundred and Eleven Lakhs and Seventy Five Thousand Only) during the year 2009-10, This will be implemented by the Department of Horticulture for the maintenance of 1210 hectares of old demonstration plots with 100% CDB share.

2. The Coconut Development Board share of Rs .211.75 lakhs will be met under the State Plan scheme namely, "Scheme for Integrated Farming in Coconut for Productivity/Improvement with Coconut Development Board Assistance (100%CDB)" Head of Account 2401-00-108-2-35-100 (Financial Assistance/Relief).

3. Budget will be released as and when Coconut Development Board provides funds.

4. This order issues with the concurrence of Finance Department vide its Note No. ಆಇ 417 ವೆ4/2008 dated 11.8.2009

By order and in the name of the Governor of Karnataka,

P.R.2368

**S. RAJU**
Under Secretary to Government
Horticulture Department

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ಶ್ರೀ ಜಿ .ಗೋವಿಂದಯ್ಯ, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**

1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಅಧಿಕೃತ ಜ್ಞಾಪನ ಸಂಖ್ಯೆ :ಸಿಬ್ಬಂದಿ 1(8) ಪಪೂಅ/112/2003–04, ದಿನಾಂಕ :7.10.2005.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಅಧಿಕೃತ ಜ್ಞಾಪನ ಸಂಖ್ಯೆ :ಸಿಬ್ಬಂದಿ 1(8)/ಪಪೂಅ/112/2003–04, ದಿನಾಂಕ :21.3.2009.
3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಅಧಿಕೃತ ಜ್ಞಾಪನ ಸಂಖ್ಯೆ :ಸಿಬ್ಬಂದಿ 1(8)/ಪಪೂಅ/112/2003–04, ದಿನಾಂಕ :20.11.2007.
4. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ :ಸಿಬ್ಬಂದಿ 1(8)/ಪಪೂಅ/112/2003–04, ದಿನಾಂಕ :24.3.2009.

**ಪ್ರಸ್ತಾವನೆ:**

ಶ್ರೀ ಜಿ. ಗೋವಿಂದಯ್ಯ, ರೇಷ್ಮೆ ಪ್ರದರ್ಶಕರು ಇವರು ದಿನಾಂಕ:24.4.1985ರಲ್ಲಿ ರೇಷ್ಮೆ ಪ್ರದರ್ಶಕರ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುತ್ತಾರೆ. ನೌಕರರು 2 ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗದ ಕಾರಣ ಇವರ ಪರಿವೀಕ್ಷಣಾ ಅವಧಿಯು ಘೋಷಣೆಯಾಗಿರುವುದಿಲ್ಲ. ನೌಕರರು ನಿಗಧಿತ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದದ ಪ್ರಯುಕ್ತರ ರೇಷ್ಮೆ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಅಧಿಕೃತ ಜ್ಞಾಪನದಲ್ಲಿ ನೌಕರರನ್ನು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 5(1)(ಬಿ)ರನ್ವಯ ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸಿ ಆದೇಶಿಸಿದ್ದು, ಈ ಆದೇಶವು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 6(1)ರ ರೀತ್ಯಾ ಸರ್ಕಾರದ ಸ್ಥಿರೀಕರಣಕ್ಕೆ ಒಳಪಟ್ಟಿದ್ದು, ಸದರಿ ಸ್ಥಿರಿಕರಣದ ನಂತರ ಜಾರಿಗೆ ಬರತಕ್ಕದ್ದೆಂದು ಆದೇಶಿಸಿರುತ್ತಾರೆ. ಸರ್ಕಾರದಿಂದ ಈ ಬಗ್ಗೆ ಸ್ಥಿರಿಕರಣವಾಗದೇ ಸದರಿ ನೌಕರರು ಸೇವೆಯಲ್ಲಿ ಮುಂದುವರೆದಿದ್ದು, ನಿಗದಿತ ಇಲಾಖಾ ಪರೀಕ್ಷೆಯನ್ನು ದಿನಾಂಕ:7.9.2006 ರಂದು ಪಾಸು ಮಾಡಿಕೊಂಡಿರುತ್ತಾರೆ. ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಂಡ ನಂತರ ನೌಕರರು ತಮ್ಮ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ಘೋಷಣೆ ಮಾಡುವಂತೆ ಕೋರಿದ್ದು, ರೇಷ್ಮೆ ಆಯುಕ್ತರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅಧಿಕೃತ ಜ್ಞಾಪನದಲ್ಲಿ ನೌಕರರನ್ನು ಸೇವೆಯಿಂದ ವಿಮುಕ್ತಿಗೊಳಿಸಿದ ಆದೇಶವನ್ನು ಹಿಂದಕ್ಕೆ ಪಡೆದಿರುತ್ತಾರೆ ಹಾಗೂ ಮೇಲೆ ಓದಲಾದ ಕ್ರಮಸಂಖ್ಯೆ (3)ರ ಅಧಿಕೃತ ಜ್ಞಾಪನದಲ್ಲಿ ನೌಕರರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1)(ii)ರನ್ವಯ ದಿನಾಂಕ:24.4.1987ರಿಂದ 23.4.1988 ರವರೆಗೆ ವಿಸ್ತರಿಸಿ ಆದೇಶಿಸಿರುತ್ತಾರೆ.

ಶ್ರೀ ಜಿ.,ಗೋವಿಂದಯ್ಯ, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ,. ಕೊರಟಗೆರೆ ಇವರು ದಿನಾಂಕ:24,4,1985 ರಂದು ಕಾರ್ಯವರದಿ ಮಾಡಿಕೊಂಡಿದ್ದು, ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಳ್ಳದ ಕಾರಣ ಸೇವೆಯಿಂದ ವಿಮುಕ್ತಿಗೊಳಿಸಲಾಗಿತ್ತು. ಸದರಿ ಆದೇಶವನ್ನು ಸ್ಥಿರೀಕರಿಸುವಂತೆ ಕೋರಲಾಗಿತ್ತು. ಈ ಮಧ್ಯೆ ನೌಕರರು ಬಾಕಿ ಇದ್ದ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಂಡಿದ್ದರಿಂದ ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1)(ii)ರನ್ವಯ ದಿನಾಂಕ:24.4.1987ರಿಂದ 23.4.1988 ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದೆ. ಸರ್ಕಾರದ ಪತ್ರ ಸಂಖ್ಯೆ:ವಾಕೈ 25 ರೇಇವಿ 2009, ದಿನಾಂಕ:20.2.2009ರ ಪತ್ರದಲ್ಲಿ ನೌಕರರ ಸೇವೆಯನ್ನು ಮುಂದುವರೆಸಲು ಇಲಾಖೆಯು ತೀರ್ಮಾನಿಸಿದಲ್ಲಿ ನೌಕರರನ್ನು ಸೇವೆಯಿಂದ ವಿಮುಕ್ತಿಗೊಳಿಸಿದ ಆದೇಶವನ್ನು ಹಿಂದಕ್ಕೆ ಪಡೆದು ಪರಿವೀಕ್ಷಣಾ ಅವಧಿಗೆ ವಿಸ್ತರಣೆಗೆ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದಂತೆ ಕಾರ್ಯವಿಮುಕ್ತಿಗೊಳಿಸಿದ ಆದೇಶವನ್ನು ಹಿಂದಕ್ಕೆ ಪಡೆದಿರುವುದಾಗಿ, ನೌಕರರು ಸೇವೆಯಲ್ಲಿ ಮುಂದುವರೆದಿದ್ದು, ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿದ್ದು, ನೌಕರರ ವಿರುದ್ಧ ದಿ:26.3.2003 ರಿಂದ ದಿನಾಂಕ:9.2.2004ರ ಅವಧಿಯಲ್ಲಿ ಶಿಸ್ತು ವಿಚಾರಣೆ ಬಾಕಿ ಇದ್ದು, 2 ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿದ್ದ ಬಗ್ಗೆ ತಿಳಿಸಿ, ಪ್ರಸ್ತುತ ನೌಕರರ ವಿರುದ್ಧ ಶಿಸ್ತು ವಿಚಾರಣೆ ಬಾಕಿ ಇರುವುದಿಲ್ಲ. ನೌಕರರು ವೇತನ ರಹಿತ ರಜೆ, ಅಸಾಧಾರಣಾ ರಜೆ ಉಪಯೋಗಿಸಿಕೊಂಡಿರುವುದಿಲ್ಲ, ತೃಪ್ತಿಕರವಾಗಿ ಕೆಲಸ ನಿರ್ವಹಿಸಿರುವುದರಿಂದ ದಿ:24.4.1988 ರಿಂದ 7.9.2006 ರವರೆಗೆ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ಆದೇಶಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ(4)ರ ಪತ್ರಗಳಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ. ಶ್ರೀ ಜಿ. ಗೋವಿಂದಯ್ಯ, ರೇಷ್ಮೆ ಪ್ರದರ್ಶಕರು ಇವರು ಸೇವೆಯಲ್ಲಿ ಮುಂದುವರೆದಿದ್ದು, ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸುಮಾಡಿರುವುದರಿಂದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ಇವರ ಪ್ರಕರಣದಲ್ಲಿ ಇವರು ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡ ದಿನಾಂಕದವರೆಗೆ ಅಂದರೆ ದಿನಾಂಕ: 24.4.1988 ರಿಂದ 7.9.2006 ರವರೆಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ವಾಕೈ 25 ರೇಇವಿ 2009, ಬೆಂಗಳೂರು, ದಿನಾಂಕ:12ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ. ಗೋವಿಂದಯ್ಯ, ರೇಷ್ಮೆ ಪ್ರದರ್ಶಕರು ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 4(1)(i)ರನ್ವಯ ದಿನಾಂಕ:24.4.1988 ರಿಂದ ದಿನಾಂಕ:7.9.2006 ರವರೆಗೆ ವಿಸ್ತರಿಸಿದೆ.

ಪರಿವೀಕ್ಷಣಾ ಅವಧಿಯನ್ನು ಘೋಷಿಸಿದ ನಂತರ ಮಾತ್ರ ವೇತನ ಮುಂಬಡ್ತಿ ಪಡೆಯಲು ನೌಕರರು ಅರ್ಹರಾಗುತ್ತಾರೆ. ವೇತನ ಮುಂಬಡ್ತಿ ಪಡೆಯುವ ಮೊದಲು ಅರ್ಹರಾಗುವ ಮೊದಲ ವೇತನ ಮುಂಬಡ್ತಿಯನ್ನು ತಡೆಹಿಡಿಯುವ ದಂಡನೆಯನ್ನು ವಿಧಿಸುವಂತಿಲ್ಲ. ಪರಿವೀಕ್ಷಣಾ ಅವಧಿಯನ್ನು ಘೋಷಿಸಿದ ನಂತರ ಮಾತ್ರ ಅವರ ವೇತನ ಬಡ್ತಿಗಳನ್ನು ತಡೆಹಿಡಿಯಲು ಕ್ರಮ ತೆಗೆದುಕೊಳ್ಳುವುದು.

ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ., ಅದನ್ನು ಘೋಷಿಸಿದ ನಂತರ ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ, ವೇತನ ಬಾಕಿಯನ್ನು ನೀಡುವಂತಿಲ್ಲ, ಈ ವಿಷಯದಲ್ಲಿ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 10ರಂತೆ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2369

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶ್ರೀ ರಾಣಾ ಜಾರ್ಜ್, ಬೆಂಗಳೂರು ಇವರನ್ನು ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 4(1)(ಬಿಬಿ)ರ ಪ್ರಕಾರ ಕರ್ನಾಟಕದಲ್ಲಿ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ನೇಮಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ :ಅಪಜೀ 198 ಎಫ್ ಡಬ್ಲ್ಯೂಎಲ್ 2006, ದಿನಾಂಕ :20.2.2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:20.2.2007ರ ಆದೇಶದಲ್ಲಿ ರಾಜ್ಯದಲ್ಲಿ ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 4(1)(ಬಿಬಿ)ರ ಪ್ರಕಾರ ಸರ್ಕಾರವು ಎರಡು ವರ್ಷದ ಅವಧಿಗೆ ಗೌರವ ವನ್ಯಜೀವಿ ಪರಿಪಾಲಕರನ್ನು ನೇಮಕ ಮಾಡಿದೆ. ಈಗ ಸದರಿ ವನ್ಯಜೀವಿ ಪರಿಪಾಲಕರ ಅವಧಿಯು ಮುಕ್ತಾಯಗೊಂಡಿರುತ್ತದೆ.

ಆದ್ದರಿಂದ ಸರ್ಕಾರವು ಈಗ ಶ್ರೀ ರಾಣಾ ಜಾರ್ಜ್, ಪೆಂಟ್ ಹೌಸ್, 7ನೇ ಮಹಡಿ ಸೆಂಟ್ ಆಂಡ್ರ್ಯೂಸ್ ಬಿಲ್ಡಿಂಗ್, ಎಂಬಾಸ್ಸಿ ಗಾಲ್ಫ್ ಲಿಂಕ್ಸ್, ಬಿಸಿನೆಸ್ ಪಾರ್ಕ್, ಇಂದಿರಾನಗರ–ಕೋರಮಂಗಲ ಇಂಟರ್ ಮೀಡಿಯೇಟ್ ರಿಂಗ್ ರಸ್ತೆ, ಬೆಂಗಳೂರು–560071 ಇವರನ್ನು ಚಿಕ್ಕಮಗಳೂರು ಜಿಲ್ಲೆಗೆ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ನೇಮಿಸಲು ಉದ್ದೇಶಿಸಿರುತ್ತದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಅಪಜೀ 135 ಎಫ್‌ಡಬ್ಲ್ಯೂಎಲ್ 2009, ಬೆಂಗಳೂರು, ದಿನಾಂಕ:15ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸರ್ಕಾರವು ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 4(1)(ಬಿಬಿ)ರ ಪ್ರಕಾರ ಶ್ರೀ ರಾಣಾ ಜಾರ್ಜ್, ಪೆಂಟ್ ಹೌಸ್, 7ನೇ ಮಹಡಿ, ಸೆಂಟ್ ಆಂಡ್ರ್ಯೂಸ್ ಬಿಲ್ಡಿಂಗ್, ಎಂಬಾಸ್ಸಿ ಗಾಲ್ಫ್ ಲಿಂಕ್ಸ್ ಬಿಸಿನೆಸ್ ಪಾರ್ಕ್, ಇಂದಿರಾನಗರ–ಕೋರಮಂಗಲ ಇಂಟರ್ ಮೀಡಿಯೇಟ್ ರಿಂಗ್ ರಸ್ತೆ, ಬೆಂಗಳೂರು–560 071 ಇವರನ್ನು ಚಿಕ್ಕಮಗಳೂರು ಜಿಲ್ಲೆಗೆ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಎರಡು ವರ್ಷದ ಅವಧಿಗೆ ಈ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ ನೇಮಕ ಮಾಡಿದೆ.

ಗೌರವ ವನ್ಯಜೀವಿ ಪರಿಪಾಲಕರ ಕರ್ತವ್ಯ ಮತ್ತು ಜವಾಬ್ದಾರಿಗಳು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಇರುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಆರ್. ಕಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ANNEXLRE 1 to Government Order No. FEE 135 FWL 2009 Dated:15.9.09.**

**DUTIES AND RESPONSIBILITY OF THE HONORARY WILDLIFE WARDENS:**

The main duty and responsibility of an Honorary Wildlife Warden is to assist whole heatedly the Chief Wildlife Warden for wildlife conservation and protection work especially with regard to the following matters:

i) Help and assist the Chief Wildlife Warden in Control of poaching and eladestine trade in wild animals and products /articles thereof.
ii) Help and assist the Chief Wildlife Warden in detection and prosecution of offences under the Wildlife (protection) Act and the Rules, made there under.
iii) Help and assist in preventing damage to the habita of wildlife including fire protection.
iv) Carrying the message of conservation to the people and enlisting public support for nature and wildlife conservation The effort should be speciallay directed towards the communities living in or near the declared wildlife reserves.
v) Any other matter connected with the protection of wildlife which may be entrustyed by the Chief Wildlife Warden of the State ,from time to time.
vi) Participate in carrying out wildlife consus etc., on the specific request permission of the Chief Wildlife Warden.

**POWERS**

In accordance with sub-section (3) of Section 4 of the Wildlife (protection) Act 1972, an Honorary Wildlife Warden appointed under sub-section (2) (c) of section 4 shall be subordinate to the Chief Wildlife Warden of the State and under section 59 of aforesaid Act, he shall be deemed to be a public servant within the meaning of section 21 of the Indian Penal Code. Protection for action taken in good faith is provided under section 60 of the Act.

**GENERAL**

(A) No staff or vehicle support can be provided to Honorary Wardens as a matter of course. However If the circumstances warrant, the department staff should provide all possible help and assistance.

(B) It is also appropriate that the actual expenses incurred by an Honorary Warden on travel by public transport for carrying out the duties assigned to him should be reimbursed by the State Government In addition all actual expenses incurred I nthe detection of an offence under the Wildlife (Protection) Act, which leads to successful prosecution may be reimbursed after due verification.

(C) The State Government should recognize outstanding work or service rendered by any Honorary Warden such recognition can be by way of a letter of commendation, or a certificate signed by the Minister in charge of the Dpearment or the membership of the State Willife Advisory Board Cash grants could also be considered in suitable cases.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2231

**ಪಿ.ಆರ್. ಕಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ವಸತಿ ಸಚಿವಾಲಯ**

**ವಿಷಯ :** ಹಾವೇರಿ ಜಿಲ್ಲೆ, ಹಿರೇಕೆರೂರು ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ/ವಇ/42/ಹೆಚ್‌ಎಂ/1999, ದಿನಾಂಕ :10.5.2000

2. ಸರ್ಕಾರದ ಆದೇಶ ಸಂ : ವಇ/18/ಹೆಚ್‌ಎಎಸ್/2008, ದಿನಾಂಕ :16.9.2009

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2) ರಲ್ಲಿ

ಓದಲಾದ ಆದೇಶವನ್ನು ಮುಂದುವರೆಸುತ್ತಾ, ಹಾವೇರಿ ಜಿಲ್ಲೆ, ಹಿರೇಕೆರೂರು ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 59 ಹೆಚ್ಎಎಸ್ 2009, ಬೆಂಗಳೂರು, ದಿನಾಂಕ:9ನೇ ಅಕ್ಟೋಬರ್, 2009**

ಹಾವೇರಿ ಜಿಲ್ಲೆ, ಹಿರೇಕೆರೂರು ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಕರಿಬಸಪ್ಪ ಕುರವತ್ತೆಪ್ಪಾ ತಿಪ್ಪಕ್ಕಳವರ | ಸಾಮಾನ್ಯ |
| 2 | ಶ್ರೀ ಮದನಶಾ ಹನೀಪಸಾಬ ಮಕಾನದಾರ | ಅಲ್ಪಸಂಖ್ಯಾತರು |
| 3 | ಶ್ರೀ ಮಾದೇವಪ್ಪ ಮಂಜಪ್ಪ ಮಾಳಮ್ಮನವರ | ಪರಿಶಿಷ್ಟ ಜಾತಿ |
| 4 | ಶ್ರೀಮತಿ ಹುಲಿಗೆಮ್ಮ ಮಂಜಪ್ಪ, ಚಾಪೇರ, ಬನ್ನಿಕೋಡ ಬಡಾವಣೆ, ಹಿರೇಕೆರೂರು. | ಹಿಂದುಳಿದ ವರ್ಗ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2407

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಕಂಇ 228 ಟಿಎನ್ಆರ್ 2009, ಬೆಂಗಳೂರು, ದಿನಾಂಕ:20ನೇ ಅಕ್ಟೋಬರ್, 2009**

ಶ್ರೀ ರಾಜೀವ್ ಚಂದ್ರಶೇಖರ್, ಮಾನ್ಯ ರಾಜ್ಯಸಭಾ ಸದಸ್ಯರು ಇವರನ್ನು ನೆರೆ ಪೀಡಿತ ಗ್ರಾಮಗಳ ಪುನರ್ವಸತಿ ಸಂಯೋಜಕರೆಂದು (State Coordinator for rehabilitation) ಈ ಕೂಡಲೇ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

**ಡಾ: ಹೆಚ್.ವಿ. ಪಾರ್ಶ್ವನಾಥ್**

ಪಿ.ಆರ್. 2409

ಸರ್ಕಾರದ ಕಾರ್ಯದರ್ಶಿ

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**PUBLIC WORKS, PORTS & IWT SECRETARIAT**

**Sub :** Constitution of District Level Grivance Redressal Committee to solve the Grievances arising at the time of Implementation of RAP-for KSHIP-II.

**Read :** 1. Government Order No:PWD 33 EAP 2008 dated:16.12.2008

2. KSHIP Letter No:PIU :KSHIP:LAQ:14:2008-09:1820 dated:19.12.2008 and 1389 dated 8.10.2009

**PREAMBLE:**

1. Government of Karnataka with the assistance of World Bank fund has taken up Karnataka State Highways Improvement Project (KSHIP). The project necessitates acquisition of private lands and properties resulting in displacement of persons and loss of livelihood In this regard a Resettlement & Rehabilitation Action Plan (RAP) is being prepared.

2. Though the RAP is comprehensive yeat there may be certain individuals or groups who feel that they are not given adequate compensation .Hence to hear their Grievances and to facilitate solution, the necessity of constitution of a Grievance Redressal Committee is felt.

3. Accordingly a, G.O. was issued constituting District Level Grivance Redressal Committee for the KSHIP Phase-II in the districts concerned to the project with certain functions. In the KSHIP letter read at (2) above, it is requested to add the following additional functions to the Grievance Redressal Committee.

1. Land Acquisition
2. Relocation of Utilities
3. Local Issues including required permits
4. Intrerdpartmental issues

5. Review/Monitoring of progress and out put performance indicators

6. User complaints.

4. Furhter in the letter No. 1389 dated 8.10.2009, KSHIP has requested to moodily the members of the cell as below, as approved by the World Bank in the action plan of R & R on 22.7.2009. The proposal is examined in detail and hence the following modified Government Order.

**Government Order No:PWD 33 EAP:2008, Bangalore, Dated:13th October, 2009**

Government is pleased to accord approval for the constitution of District Level Redressal Grievance Committee consisting of the following members for Bagalkot, Belgaum, Gadag, Dharwad, Bellary, Chitradurga, Tumkur, Chikkaballapur, Kolar, Mandya, Mysore Madikeri, Dakshina Kannada, Uttara Kannada, Hassan, Shimoga, Haveri, Raichur, Gulbarga, Davanagere, Koppala and Bangalore Rural District to redress the grievances of the PAF's arising at the time of implementation of RAP for stage-1, KSHIP-II.

| | | |
|---|---|---|
| 1) | Deputy Commissioner | Chariman |
| 2) | The Representative from Social Sector/Academia/Retired Government Officer (to be selected by the DC) | Member |
| 3) | Representative from Project Affected Person (to be selected by the DC) | Member |
| 4) | Concerned Executive Engineer | Convener |
| | Appellate Authority shall be the Regional Commissioner of concerned region | |

The functions of the Grierances Redresses committee shall be as below:

1) To provide support to Project Affected Person (PAP) on problems arising out of eligibility for RAP provided entitlements, compensation and assistance provided.
2) To record the grievances of the PAPs and categories, priorities and solve them within one month
3) To inform PIU of serious cases within an appropriate time frame,
4) To report to the aggrieved parties about the development regarding their grievances ad decisions of the PIU.
5) The Grievances Committee will meet regularaly (not less than once a month ) on a pre-fixed date during implementation of the RAP. The committees will suggest corrective measures at the field level itself and fix responsibilities for implementation of its decisions The Committee will deliver their decision with in a month of case registration.
6) Problems and complaints arising out of land acquisition and relocation of utilities.
7) Local issues including required permits during execution
8) Interdepartmental issues during execution
9) Review/Monitoring of progress and out put performance indicators.
10) Road user complaints during implementation and after completion.

Decision of the Appellate Authority will be final and not to be contested in any other forum except in the courts of law. However, the NGOs will form the first level intervention in resolving PAP related grievances and attempt to motivate the PAP to facilitate implementation of the R & R programme in the true spirit.

By order and in the name of the Governor of Karnataka,

P.R. 2412

**M. DEVIPRASAD**

Under Secretary to Government

Public Works, Ports & IWT Department (EAP)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಆಯುಷ್ ಇಲಾಖೆಯ ಸೇವಾನಿರತ ಅಭ್ಯರ್ಥಿಗಳನ್ನು ಆಯುರ್ವೇದ ಸ್ನಾತಕೋತ್ತರ ಪದವಿ ಕೋರ್ಸಿನ ಮೀಸಲು ಸ್ಥಾನಗಳಿಗೆ ಮೆರಿಟ್ ಹಾಗೂ ರೋಸ್ಟರ್ ಆಧಾರದ ಮೇಲೆ ಆಯ್ಕೆ ಮಾಡಿಕೊಳ್ಳುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ :ಆಕುಕ 18 ಪಿಟಿಡಿ 2006, ದಿ :19.1.2006
2. ಸರ್ಕಾರದ ಆದೇಶ ಸಂಖ್ಯೆ :175 ಪಿಟಿಡಿ 2007 ದಿ :30.5.2007
3. ನಿರ್ದೇಶಕರು, ಆಯುಷ್ ಇವರ ಪ್ರಸ್ತಾವನೆ ಸಂಖ್ಯೆ : ಆಯುಷ್ :29 :ಅಭಿವೃದ್ಧಿ (1) 9–10 ದಿ :20.9.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರಲ್ಲಿನ ಸರ್ಕಾರದ ಆದೇಶದಲ್ಲಿ ರಾಜ್ಯದ ಖಾಸಗಿ ಆಯುರ್ವೇದ/ ಹೋಮಿಯೋಪತಿ/ ಫಾಮರ್ಸಿ/ನರ್ಸಿಂಗ್/ಫಿಜಿಯೋಥೆರಪಿ ಕಾಲೇಜುಗಳಲ್ಲಿ ಸ್ನಾತಕೋತ್ತರ ಪದವಿ ಕೋರ್ಸುಗಳ ಪ್ರವೇಶವಕಾಶ ವಿನಿಯಮಾವಳಿಗಳು 2006ನ್ನು ಜಾರಿಗೆ ತರಲಾಗಿದೆ. ಸದರಿ ನಿಯಮಾವಳಿಗಳಲ್ಲಿ ಸೇವಾನಿರತ ಅಭ್ಯರ್ಥಿಗಳಿಗೆ ಯಾವುದೇ ರೀತಿಯ ಮೀಸಲಾತಿ ನಿಯಮವನ್ನು ನಮೂದಿಸಿರುವುದಿಲ್ಲ. ಆದರೆ ಸಾಮಾನ್ಯವಾಗಿ ಸ್ನಾತಕೋತ್ತರ ಕೋರ್ಸ್‌ಗಳಿಗೆ ಸಿ.ಇ.ಟಿ. ಪರೀಕ್ಷೆಯಲ್ಲಿ ಶೇ. 50 ರಷ್ಟು ಅಂಕಗಳನ್ನು ಸಾಮಾನ್ಯ ಅಭ್ಯರ್ಥಿಗಳಿಗೆ ಮತ್ತು ಶೇ. 40 ರಷ್ಟು ಅಂಕಗಳನ್ನು ಪ.ಜಾ/ಪ.ಪಂ. ಅಭ್ಯರ್ಥಿಗಳಿಗೆ ಅರ್ಹತೆಗಾಗಿ ನಿಗದಿಗೊಳಿಸಲಾಗಿದೆ. ಅದೇ ನಿಯಮದ 8 ರಲ್ಲಿ ಸಂಬಂಧಿಸಿದ ಸಂಸ್ಥೆಯು ನಿಯಮಗಳನ್ನು ರೂಪಿಸಲು ಅವಕಾಶ ಕಲ್ಪಿಸಲಾಗಿದೆ. ನಿಯಮ 9ರಲ್ಲಿ ಪ್ರವೇಶ ಪರೀಕ್ಷೆಗೆ ಸಂಬಂಧಪಟ್ಟ ವಿಷಯಗಳನ್ನು ಪ್ರವೇಶ ಪರೀಕ್ಷಾ ಪ್ರಾಧಿಕಾರವು ಅಂತಿಮ ತೀರ್ಮಾನವನ್ನು ತೆಗೆದುಕೊಳ್ಳಲು ಅವಕಾಶವಿರುತ್ತದೆ. ಈ ಹಿನ್ನೆಲೆಯಲ್ಲಿ ಸೇವಾ ನಿರತ ಅಭ್ಯರ್ಥಿಗಳಿಗೆ ಯಾವುದೇ ಶೇಕಡಾವಾರು ಅಂಕಗಳನ್ನು ನಿಗದಿಪಡಿಸಿರುವುದಿಲ್ಲ. ಆದರೆ ಸೇವಾನಿರತ ಅಭ್ಯರ್ಥಿಗಳಿಗೆ ಸೀಟುಗಳನ್ನು ಕಾಯ್ದಿರಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (2)ರಲ್ಲಿನ ಸರ್ಕಾರದ ಆದೇಶದಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಸಾಮಾನ್ಯ ಅಭ್ಯರ್ಥಿಗಳಿಗೆ ಶೇ. 50 ರಷ್ಟು ಹಾಗೂ ಪ.ಜಾ/ಪ.ಪಂ. ಮತ್ತು ಒ.ಬಿ.ಸಿ. ಅಭ್ಯರ್ಥಿಗಳಿಗೆ ಶೇ. 40 ರಷ್ಟು ಅಂಕಗಳನ್ನು ಪಡೆದಿರುವುದನ್ನು ಪರಿಗಣಿಸಿ ಆದೇಶಿಸಲಾಗಿದೆ. ಆದರೆ ಸೇವಾ ನಿರತ ಅಭ್ಯರ್ಥಿಗಳಿಗೆ ಮೇಲಿನ ಸರ್ಕಾರಿ ಆದೇಶದಲ್ಲಿ ಯಾವುದೇ ಉಲ್ಲೇಖವನ್ನು ಮಾಡಿರುವುದಿಲ್ಲ.

ಮೇಲೆ ಓದಲಾದ ಕ್ರ.ಸಂ. (3) ರಲ್ಲಿನ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಆಯುಷ್ ಇವರು ಸೇವಾನಿರತ ಅಭ್ಯರ್ಥಿಗಳಿಗೆ 2009–10ನೇ ಸಾಲಿನಲ್ಲಿ ಒಟ್ಟು 12 ಸೀಟುಗಳನ್ನು ಪ್ರವೇಶಕ್ಕೆ ಅವಕಾಶ ಇರುವುದಾಗಿ ತಿಳಿಸಿ ಇದುವರೆಗೂ ಕೇವಲ 03 ಸೀಟುಗಳನ್ನು ಮಾತ್ರ ಭರ್ತಿ ಮಾಡಲಾಗಿದೆಯೆಂದು ಮತ್ತು ಇನ್ನು 09 ಸೀಟುಗಳು ಬಾಕಿ ಇರುವುದಾಗಿ ತಿಳಿಸಿ ಈಗಿರುವ ಕನಿಷ್ಟ ಶೇ. 50 ರಷ್ಟು ಅಂಕಗಳನ್ನು ಪಡೆದಿರಬೇಕು ಎಂಬ ನಿಯಮವನ್ನು ಸಡಿಲಿಸಿ ಶೇ. 40ಕ್ಕೆ ಸೇವಾ ನಿರತ ಅಭ್ಯರ್ಥಿಗಳಿಗೆ ಅವಕಾಶ ಮಾಡಿಕೊಡಲು ಅನುಕೂಲವಾಗುವಂತೆ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಪ್ರವೇಶ ಪರೀಕ್ಷೆಯ ನಿಯಮಗಳಲ್ಲಿ ಸೇವಾ ನಿರತ ಅಭ್ಯರ್ಥಿಗಳಿಗೆ ಇದುವರೆಗೂ ಯಾವುದೇ ಅಂಕಗಳನ್ನು ನಿಗದಿಪಡಿಸದೇ ಇರುವುದರಿಂದ ಸೇವಾ ನಿರತ ಅಭ್ಯರ್ಥಿಗಳು ಸೇವೆಯಲ್ಲಿ ಅನುಭವವನ್ನು ಹೊಂದಿರುವುದರಿಂದ ಸೇವಾನಿರತ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಸ್ಥಾನಗಳಲ್ಲಿ ಮೀಸಲಾತಿ ಅನ್ವಯ ಪ್ರವೇಶ ಪರೀಕ್ಷೆಯನ್ನು ಪಡೆದಂತಹ ಅಭ್ಯರ್ಥಿಗಳಲ್ಲಿ ಸೇವಾನಿರತ ಅಭ್ಯರ್ಥಿಗಳನ್ನು ಮೀಸಲು ಸ್ಥಾನಗಳಿಗೆ ಮೆರಿಟ್ ಹಾಗೂ ರೊಸ್ಟರ್ ಆಧಾರದ ಮೇಲೆ ಆಯ್ಕೆ ಮಾಡಿಕೊಳ್ಳಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: 353 ಪಿಟಿಡಿ 2009, ಬೆಂಗಳೂರು, ದಿನಾಂಕ:16ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸ್ನಾತಕೋತ್ತರ ಕೋರ್ಸುಗಳಿಗೆ ಸೇವಾ ನಿರತ ಅಭ್ಯರ್ಥಿಗಳು ಪ್ರವೇಶ ಪರೀಕ್ಷೆಯನ್ನು ಪಡೆದಂತಹ ಅಭ್ಯರ್ಥಿಗಳಲ್ಲಿ ಸೇವಾನಿರತ ಮೀಸಲು ಸ್ಥಾನಗಳಿಗೆ ಮೆರಿಟ್ ಹಾಗೂ ರೋಸ್ಟರ್ ಆಧಾರದ ಮೇಲೆ ರಾಜೀವಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯರವರಿಗೆ ಎರಡನೇ ಸುತ್ತಿನ ಕೌನ್ಸಿಲಿಂಗ್ ನಡೆಸುವಾಗ ಆಯ್ಕೆ ಮಾಡಿಕೊಳ್ಳಲು ಸರ್ಕಾರವು ಅನುಮತಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2414

**ಎನ್. ಮಹಾಲಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**HIGHER EDUCATION SECRETARIAT**

**Sub :** Issue of terms and conditions of appointment of Prof. Mallepuram G. Venkatesh, Special Officer for establishment of Karnataka Sanskrit Veda University.

**Read :** 1. Government Notification No.ED 138 UMV 2008, dated 22.9.08

2. Letter dated 21.7.2009 from Prof. Mallepuram G. Venkatesh, Special Officer for establishment of Karnataka Sanskrit Veda University.

**PREAMBLE:**

A scale-less post of Special Officer has been created for establishment of Karnataka Sanskrit Veda University and Prof. Mallepuram G. Venkatesh, Professor and Director, Prasaranga, Kannada University Hampi has been appointed as Special Officer vide Government Notification dated 22.9.2008 read (1) above. The Officer has assumed charge of the said post on 25.9.2008 It is necessary to issue terms and conditions of his appointment Hence the following orders.

**Order No.ED 103 URC 2009, Bangalore, Dated:15th October, 2009**

Government are pleased to issue the terms and conditions of appointment of Prof Mallepuram G. Venkatesh, Professor and Director, Prasaranga, Kannada University, Hampi as the Special Officer for establishment of Karnataka Sanskrti Veda University with Head Quarters at Bangalore which are as appended to this order.

This issues with the concurrence of the Finance Department vide Nos. FD 1218 Exp-8/09, dated:14.9.2009 and FD 1420 Exp-8/09, dated 7.10.2009.

By order and in the name of the Governor of Karnataka,

**B.S. JAPALI**

Deputy Secretary to Government

Higher Education Department (Universities)

**APPENDIX TO G.O.NO. ED 103 URC 2009, DATED 15TH OCTOBER, 2009**

**TERMS AND CONDITIONS OF DEPUTATION OF PROF. MALLEPURAM G. VENKATESH, PROFESSOR AND, DIRECTOR, PRASARANGA, KANNADA UNIVERSITY, HAMPI AS THE SPECIAL OFFICER FOR ESTABLISHMENT OF KARNATAKA SANSKRIT-VEDA UNIVERSITY WITH HEAD QUARTERS AT BANGALORE**

**1. PERIOD:** The period of service of Prof. Mallepuram G. Venkatesh, Professor and Director, Prasaranga, Kannada University, Hampi is for the period of two years or as desired by the Higher Education Department with the Office of the Special Officer for the establishment of Karnataka Sanskrit Veda University with Head Quarters at Bangalore or until further order whichever is earlier.

**2. COMMENCEMENT AND END OF APPOINTMENT:** The Appointment shall commence with effect from 25.9.2008 and ends on the date he relinquishes his office.

**3. PAY AND OTHER ALLOWANCES**: During the period of appointment Prof.Mallepuram G. Venkatesh shall be entitled to pay including DA/HRA/CCAadmissible to him in his parent organization. He shall not be entitled to any other deputation or foreign service allowance.

**4. LEAVE RULES**: He will be governed by the leave rules as applicable to him in his parent organization.

**5. LEAVE SALARY CONTRIBUTION:** The Karnataka Sanskrit Veda Unversity shall pay Leave Salary Contribution at the rate 11% of his pay.

**6. PENSION CONTRIBUTION:** Pension contribution shall be paid by the Karnataka Sanskrit Veda University at the rate of 12.5% on the total basic pay received during the period of deputation as per statute.

**7. MEDICAL CONCESSION:** The official shall be entitled to the medical attendance as per the Karnataka Government Servants (Medical Attendance) Rules, 1963.

8. He shall perform the functions of Special Officer and attend to all work entrusted to him from time to time by the Government of Karnataka.

9. He shall perform his duties diligently and he shall maintain strict secrecy in respect of official information which he comes to know in the course of his duties.

10. He shall be liable to reimburse to Government all the losses which the Government may sustain due to misconduct of any sort on his part.

**B.S. JAPALI**

P.R. 2418

Deputy Secretary to Government
Higher Education Department (Universities)

## INFORMATION TECHNOLOGY, BIOTECHNOLOGY AND SCIENCE & TECHNOLOGY SECRETARIAT

**Sub :** Transfer of approval from M/s RMZ Infotech Pvt. Ltd., to M/s RMZ Businesspark (India) Pvt. Limited (Location:Mysore Indistrial Area, 3rd Phase, Koorgalli village, Mysore)

**Read :** Proceedings of the 14th State High Level Clearance Committee (SHLCC) meeting held on 17.3.2008.

**PREAMBLE:**

The project proposal of M/s RMZ Infotech Pvt., Ltd., the Millenia Tower B, Level 2, No. 12-14, 1 & 2 Murphy Road, Ulsoor, Bangalore-560008, to establish a "IT/ITES SEZ", with an investment of Rs. 442.21 crores, in 25 acres of land, at plot No. 2 (Corner Plot) of Mysore Industrial area, III Phase, Koorgalli Village, Mysore, was approved in the 10th SHLCC meeting held on 28.8.2007.

The company, has requested to transfer the SHLCC approval given to them to M/s RMZ Businesspark (India) Pvt. Ltd., which is a Special Purpose Vehicle (SPV) with common directors on the Board The Company has requested to transfer the SHLCC approval given to them to M./s RMZ corp Holdings Pvt. Ltd., which is a Special Purpose Vehicle (SPV) and has common directors on the Board.

In the proposal submitted for the 14th State High Level Clearance Committee (SHLCC) meeting held on 17.3.2008, the Company had requested for transfer of approval from M/s RMZ Infotech Pvt. Ltd., to M/s RMZ Businesspark (India) Pvt. Ltd.,

The State High Level Clearance Committee, after detailed discussion, approved the proposal.

Hence the following order:

**Government Order No:ITD:08 MDA:2008, Bangalore, Dated:20th October, 2009**

In the circumstances explained in the Preamble, Government are pleased to accord approval to transfer of approval from M/s RMZ Infotech Pvt. Ltd., to M/s RMZ Businesspark (India) P Limited and approved the proposed amenedment.

The Promoter shall submit milestones /progress in implementation of the project regularly which will be monitored by the Departments concerned.

By order and in the name of the Governor of Karnataka,

P.R. 2419

**M.V. KRISHNAMURTHY**
Under Secretary to Government
Information Technology, Biotechnology and Science & Technology Department

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ. ಪ್ರಭಾಕರ್, ಪಿ.ಎಸ್.ಐ., ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಶಿಕ್ಷೆ/40 /2006–07 ಓ.ಬಿ/ಸಿವಿಲ್/130/06–07 ದಿ: 30–08–2006
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/32/2006–07 ದಿನಾಂಕ: 15–02–2007

3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:13–08–07.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)71/2007–08 ದಿನಾಂಕ: 12–11–2007 & 21–01–2009
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 61 ಸಿಎನ್‌ಎಸ್ 09 ದಿನಾಂಕ: 22–07–2009

**ಪ್ರಸ್ತಾವನೆ:**

ಶ್ರೀ ಕೆ. ಪ್ರಭಾಕರ್, ಪಿ.ಎಸ್.ಐ., ಇವರು ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ಲೋಪದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

``ದಿ:14-07-06 ರಂದು ನಂಜನಗೂಡು ಬ್ರಿಡ್ಜ್ ಹತ್ತಿರ ಹಿಂದಿನಿಂದ ಬಂದ ವಾಹನ ಹಾಗೂ ಗುಂಡ್ಲುಪೇಟೆ ಕಡೆಯಿಂದ ಬಂದ ವಾಹನಗಳೆರಡು ಕೆ.ಎಲ್–10–ಎನ್–2702 ಕ್ವಾಲೀಸ್ ವಾಹನಕ್ಕೆ ಒಟ್ಟಿಗೆ ಎರಗಿ ವಾಹನದಲ್ಲಿದ್ದವರಿಗೆ ಹೊಡೆದು ಸದರಿ ವಾಹನವನ್ನು ಕಿತ್ತುಕೊಂಡು ಹೋಗಿದ್ದು, ಈ ದರೋಡೆ ಪಕರಣವು ನಿಮ್ಮ ಠಾಣಾ ವ್ಯಾಪ್ತಿಯಲ್ಲಿ ಸಂಭವಿಸಿರುತ್ತದೆ. ಸದರಿ ದಿನಾಂಕದಂದು ನಂಜನಗೂಡು ಗಾಮಾಂತರ ವ್ಯಾಪ್ತಿಯಲ್ಲಿ ಈ ಘಟನೆ ಸಂಬವಿಸಿದ್ದರೂ ಸಹ ಅತೀವವಾದ ಬೇಜವಾಬ್ದಾರಿ ಹಾಗೂ ನಿರ್ಲಕ್ಷ್ಯತೆಯಿಂದ 7ನೇ ಬೀಟ್ ರಾತ್ರಿ ಗಸ್ತು ಕರ್ತವ್ಯಕ್ಕೆ ನೇಮಿಸದೇ ಇರುವುದರ ಮೂಲಕ ಕರ್ತವ್ಯ ಲೋಪವೆಸಗಿರುತ್ತೀರಿ.``

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 30–08–2006ರ ಆದೇಶದಲ್ಲಿ ಅರ್ಜಿದಾರರಿಗೆ **"ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ತಡೆಹಿಡಿಯುವ"** ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 15–02–2007ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರದ ದಂಡನೆಯನ್ನು ಮಾರ್ಪಡಿಸುವ ಸಲುವಾಗಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿದ್ದು, ಆಯೋಗವು ಸರ್ಕಾರವು ಪ್ರಸ್ತಾಪಿಸಿರುವ ದಂಡನೆಯು ಲಘುವಾಗಿರುವುದರಿಂದ ಶಿಸ್ತು ಪ್ರಾಧಿಕಾರದ ದಂಡನೆಗೆ ಓದಲಾದ (5)ರ ಪತ್ರದಲ್ಲಿ ಸಹಮತಿ ನೀಡಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 361 ಪೊಸಿಅ 2007 ಬೆಂಗಳೂರು ದಿನಾಂಕ: 07ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ. ಪ್ರಭಾಕರ್, ಪಿ.ಎಸ್.ಐ., ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2172

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಬಿ. ಉಮಾಶಂಕರ, ಪಿ.ಐ., ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು, ಇವರ ಆದೇಶ ಸಂಖ್ಯೆ: ಪೆನ್ನಿ/85/2005–06 ಓ.ಬಿ: 2/2008 ದಿನಾಂಕ: 02–01–2008
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು 5/ಪನ್ನಿ/2008–09 ಓ.ಬಿ: 39/2008–09 ದಿನಾಂಕ: 06–06–2008

3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 27–11–2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)114/2008–09 ದಿನಾಂಕ: 28–03–2009
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 57 ಸಿಎನ್‌ಎಸ್ 2009 ದಿನಾಂಕ: 21–07–2009

**ಪ್ರಸ್ತಾವನೆ:**

ಶ್ರೀ ಬಿ. ಉಮಾಶಂಕರ, ಪಿ.ಐ., ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಬೆಂಗಳೂರು, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಕ್ಯಾತಸಂದ್ರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್–ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು,

**ದೋಷಾರೋಪಣೆ:**

> " ನೀವು ಈ ಹಿಂದೆ ಪಿ.ಎಸ್.ಐ., ಆಗಿ ಕ್ಯಾತಸಂದ್ರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕ್ಯಾತಸಂದ್ರ ಪೊಲೀಸ್ ಠಾಣೆಯಿಂದ ಕೊರಟಗೆರೆ ಠಾಣೆಗೆ ಓ.ಓ.ಡಿ. ಆಧಾರದ ಮೇಲೆ ನೇಮಿಸಿದ್ದು, ಕ್ಯಾತಸಂದ್ರ ಪೊಲೀಸ್ ಠಾಣೆಯಿಂದ ಬಿಡುಗಡೆ ಹೊಂದಿ ಕೊರಟಗೆರೆ ಠಾಣೆಯಲ್ಲಿ ಕರ್ತವ್ಯಕ್ಕೆ ಗೈರುಹಾಜರಾಗಿ, ರಜೆಯನ್ನು ಮಂಜೂರು ಮಾಡಲು ವೈದ್ಯಕೀಯ ಆಧಾರದ ಮೇಲೆ ಕೋರಿರುತ್ತೀರಿ. ಈ ಸಂಬಂಧ ವೈದ್ಯಕೀಯ ಮಂಡಳಿಯಿಂದ ವೈದ್ಯಕೀಯ ಪರೀಕ್ಷೆಗೆ ಹಾಜರಾಗುವಂತೆ ನಿಮಗೆ ನೋಟೀಸ್ ನೀಡಿದಾಗ್ಯೂ, ತನಗೆ ನೋಟೀಸ್ ತಲುಪಲಿಲ್ಲ ಎಂಬುವ ನೆಪವೊಡ್ಡಿ ವೈದ್ಯಕೀಯ ಪರೀಕ್ಷೆಗೆ ಹಾಜರಾಗಿರುವುದಿಲ್ಲ. ನೀವು ಗೈರುಹಾಜರಾದ ಅವಧಿ ಆದ ನಂತರ ಮೂರು ವರ್ಷಗಳು ಕಳೆದರೂ ಸದರಿ ಅವಧಿಯ ಇತ್ಯರ್ಥದ ಬಗ್ಗೆ ಯಾವುದೇ ಆಸಕ್ತಿಯನ್ನೂ ತೋರಿಸದೇ, ನೀವು ನಿಮ್ಮ ಕರ್ತವ್ಯದಲ್ಲಿ ಉದ್ಧಟತನ ಮತ್ತು ಅತೀವ ನಿರ್ಲಕ್ಷತೆ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 02–01–2008ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮೂರು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ, ಗೈರು ಹಾಜರಾದ ಅವಧಿಯನ್ನು ಸಂಬಳರಹಿತ ರಜೆಯೆಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 06–06–2008ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ತೀರ್ಮಾನಿಸಿ, ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 18 ಪೊಸಿಅ 2009 ಬೆಂಗಳೂರು, ದಿನಾಂಕ: 01ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ. ಉಮಾಶಂಕರ, ಪಿ.ಐ., ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ, ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಿ ಆದೇಶಿಸಿದೆ. ಗೈರುಹಾಜರಾದ ಅವಧಿಯನ್ನು ಸಂಬಳರಹಿತ ರಜೆಯೆಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2173

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು)